ಚಂದಾ ದರ
( ಅಂಚೆವೆಚ್ಚ ಸೇರಿ )
ವರ್ಷಕ್ಕೆ ರೂ. ೬-೪-೦
೬ ತಿಂಗಳಿಗೆ ,, ೩-೪-೦
೩ ತಿಂಗಳಿಗೆ ,, ೧-೧೨-೦
ವ್ಹಿ. ಪಿ. ಮೂಲಕ
ಕಳಿಸಿಕೊಂಡಲ್ಲಿ ೫ ಆಣೆ
ಹೆಚ್ಚಿಗೆ ಬೀಳುವದು.

# ಕರ್ಮವೀರ

KARMAVEER
WEEKLY
HUBLI
*
AUG, 26
1946

ಸಂಪಾದಕರು :
ಹ. ರಾ. ಪುರೋಹಿತ, ಎಂ. ಎ. ]

ಅಖಿಲ ಕರ್ನಾಟಕದಲ್ಲಿ ಅತ್ಯಂತ ಜನಪ್ರಿಯ ವಾರಪತ್ರಿಕೆ

[ Editor : H. R. Purohit, M. A.

ಸಂಪುಟ ೧೮ ] ● ಹುಬ್ಬಳ್ಳಿ ಸೋಮವಾರ ತಾರೀಖು ೨೬ — ೮ — ೧೯೪೬ ● [ ಸಂಚಿಕೆ ೩೦

# ಮಹಾದೇವ ದೇಸಾಯರ ಕೊನೆಯ ದಿನಗಳು

[ "ಹರಿಜನ"ದಲ್ಲಿ ಶ್ರೀ ಪ್ಯಾರೇಲಾಲರಿಂದ ]

ದಿವಂಗತ ಶ್ರೀಮತಿ ಕಸ್ತೂರಬಾ ಗಾಂಧಿ ಮತ್ತು ದಿವಂಗತ ಶ್ರೀ ಮಹಾದೇವ ದೇಸಾಯಿ, ಈ ಇಬ್ಬರ ವಿಷಯದಲ್ಲಿ ೧೯೪೨ರ ಆ ದುರ್ಘಟ ವರ್ಷದ ಭಾವೀ ಘಟನೆಗಳ ಕರಿನೆರಳು ಮುಂಚಿತವಾಗಿಯೆ ಕಾಣಿಸಿಕೊಂಡಿತ್ತು. ಆಗಾಖಾನ ಅರಮನೆಯ ಮಹಾದ್ವಾರದಲ್ಲಿ ಪ್ರವೇಶಿಸಿದ ದಿನದಿಂದಲೆ ಇಲ್ಲಿಂದ ತಾವು ಬದುಕಿ ಹೊರಬೀಳುವಂತಿಲ್ಲ ಎಂಬೊಂದು ಪ್ರತೀತಿ ಏಕೋ ಬಾ ಅವರ ಮನಸಿನಲ್ಲಿ ಮೂಡಿಬಿಟ್ಟಿತ್ತು. ಆ ಪ್ರತೀತಿ ಸತ್ಯವಾಗಿಯೂ ಪರಿಣಮಿಸಿತು. ಶ್ರೀ ದೇಸಾಯರ ವಿಷಯದಲ್ಲಿ, ಆ ಪೂರ್ವಚ್ಛಾಯೆ ಸ್ವತಃ ತಮ್ಮ ಸನ್ನಿಹಿತ ಮೃತ್ಯುವಿನದಾಗಿರಲಿಲ್ಲ. ಬದಲಿಗೆ ತಮ್ಮ ಜೀವನನಿಮಿತ್ತನೂ ಜೀವನಾಶ್ರಯನೂ ಜೀವನ ಸ್ವರೂಪನೂ ಆದ ಗುರುವಿಗೆ ವಿಪತ್ತು ಬರುವದೆಂಬ ಭೀತಿಯ ರೂಪು ತಳೆದಿತ್ತು. ತಮ್ಮ ಬಂಧನವಾದ ಪ್ರಸಂಗದಲ್ಲಿ ತಾವು ಉಪವಾಸವನ್ನು ಕೈಕೊಳ್ಳಬೇಕಾದೀತು ಎಂದು ಗಾಂಧೀಜಿ ಸೂಚ್ಯವಾಗಿ ತಿಳಿಸಿದಂದಿನಿಂದ ಆ ಚಿಂತೆ ಮಹಾದೇವರ ಮನಸನ್ನು ದುಃಸ್ವಪ್ನದಂತೆ ಕಾಡತೊಡಗಿತ್ತು. ಅದನ್ನು ತಪ್ಪಿಸಲು ಅವರು ಭೀಮನಂತೆ ಹೆಣಗಿದರು. ಒಂದು ದಿನ ಅವರು ನನ್ನನ್ನು ಸಂಜೆಯ ಗಾಳಿ ಸವಾರಿಗೆ ಕರೆದರು. "ಏನೋ ಒಂದು ಚಿಂತೆ ನನ್ನ ಜೀವ ತಿನ್ನುತಿದೆ. ಅದನ್ನು ನಿನ್ನೊಡನೆ ಚರ್ಚಿಸಬೇಕೆನ್ನುವೆ," ಎಂದರವರು. "ನನಗೂ ಹಾಗೆಯೆ," ಎಂದೆ ನಾನು. ಒಂದೇ ವಿಷಯದಲ್ಲಿ ಪರಸ್ಪರ ಮನಸು ಹಗುರು ಮಾಡಿಕೊಳ್ಳು ಉತ್ಕಂಠೆ ನಮ್ಮಿಬ್ಬರಲ್ಲಿ ಒಮ್ಮೆಲೆ ಮೂಡಿದುದು ಇದು ಮೊದಲನೆ ಬಾರಿ ಅಲ್ಲ. ವಿಷಯದ ಪೂರ್ವಾಪರವನ್ನೆಲ್ಲ ಕೆದಕೆದರಿ ಚರ್ಚಿಸಿ ಸಂಪೂರ್ಣ ಐಕಮತ್ಯಕ್ಕೆ ಬಂದೆವು. "ಇನ್ನು ನಮ್ಮ ವಿಚಾರಗಳನ್ನು ಬಾಪುವಿನ ಮುಂದಿರಿಸೋಣ. ಈ ರಾತ್ರಿಯೇ ನಾನು ಅದನ್ನು ಮಾಡಿಬಿಡುವೆ. ನೀನೂ ಹಾಗೆಯೆ ಮಾಡು," ಎಂದು ಅವರು ನನಗೆ ಹೇಳಿದರು. ಅದೇ ಪ್ರಕಾರ, ಆ ಮೇಲೆ ಎರಡು ಟಿಪ್ಪಣಿಗಳನ್ನು ಸಿದ್ಧಗೊಳಿಸಿ 'ಪೂರ್ವ ಯೋಜನೆಯಂತೆ' ಅದನ್ನು ಗಾಂಧೀಜಿಗೆ ಒಪ್ಪಿಸಿದ್ದಾಯಿತು.

## ಮುನ್ನೆಚ್ಚರಿಕೆ

ತಿರುಗಿ ಬರುತಿರುವಾಗ ನಾನು ಪರಿಹಾಸಕ್ಕಾಗಿ, "ಎಂದೂ ಕೈಬಿಡದ ವ್ಯವಹಾರಚಾತುರ್ಯವಿರುವ ನೀವು ಈ ಗಂಡಾಂತರದಿಂದ ಪಾರಾಗುವ ಹಾದಿ ಹುಡುಕಲಾರಿರಾ? " ಎಂದು ಕೇಳಿದೆ. "ಈ ಬಾರಿ ದೈವವೇ ನಮಗೆ ಮುನಿದಂತೆ ತೋರುತ್ತದೆ," ಎನ್ನುವಾಗ ಅವರ ಮುಖದಿಂದ ನಿಟ್ಟುಸಿರೊಂದು ಹೊರಟುಹೋಯಿತು. ನಾನು ನನ್ನ ಪರಿಹಾಸವನ್ನು ಸಾಗಿಸುತ್ತಲೆ ಹೋದೆ. ನಾವು ಹಳೆಗಾಲವನ್ನು ಕುರಿತು ಮಾತಾಡತೊಡಗಿದೆವು. ಆದರೆ ಒಮ್ಮೆಗೆ ಅವರ ಮುಖದ ನಸುನಗೆ ಮಾಯವಾಗಿಬಿಟ್ಟಿತ್ತು. ಅಕಸ್ಮಾತ್ತಾಗಿ ಕಣ್ಣುಕತ್ತಲು ಕವಿದು ಅವರು ಮಾರ್ಗದ ಬದಿಯಲ್ಲಿ ಕುಳಿತುಕೊಳ್ಳಬೇಕಾಯಿತು. "ನನ್ನ ಮನಸು ಒಮ್ಮಿಂದೊಮ್ಮೆ ಏಕೆ ಬಟ್ಟಬಯಲಾಗಿಬಿಟ್ಟಿತೋ ನಾನರಿಯೆ," ಎಂದು ಅವರು ಹೇಳಿದರು. ಆದರೆ ಅವರನ್ನು ಕವಿದ ಕಣ್ಣುಕತ್ತಲು ಬಂದಷ್ಟೇ ಬೇಗನೆ ಹೊರಟುಹೋಯಿತು. ಮಾತ್ರ ನಾವು ಅವರ ಮನೆಗೆ ಮುಟ್ಟಿದಾಗ ಅವರ ನಾಡಿ ಬಹಳ ದುರ್ಬಲವೂ ಅತ್ಯಂತ ವೇಗಶೀಲವೂ ಆಗಿತ್ತು. ರಕ್ತದ ಒತ್ತಡವೂ ಇಳಿದು ಹೋಗಿತ್ತು. ಅತಿರೇಕ ಮಾನಸಿಕ ಶ್ರಮದಿಂದ ಹುಟ್ಟುವ ಹೃದಯಸ್ತಂಭ ರೋಗದ ಮೊದಲ ಮಂದ ಅಭಿಯೋಗ ಅದೆಂದು ನಮಗಾಗ ಗೊತ್ತಾಗಲಿಲ್ಲ. ಅದೇ ಅವರನ್ನು ಮತ್ತೆರಡು ತಿಂಗಳಲ್ಲಿ ನುಂಗಿ ನೀರು ಕುಡಿಯುವದಿತ್ತು.

ಈ ನಡುವೆ "ಚಲೇಜಾವ್" ಹೋರಾಟದ ಸಂಭವ ದಟ್ಟವಾಗಿ ಹಬ್ಬುತ್ತ ಹೋಗುತಿತ್ತು. ಅದು "ಮಾಡು ಇಲ್ಲವೆ ಮಡಿ " ಹೋರಾಟವಾಗುವದಿತ್ತು. ಅದರಲ್ಲಿ ಯಾರೂ ರಿಯಾಯಿತಿಯನ್ನು ನಿರೀಕ್ಷಿಸುವಂತೂ ಇದ್ದಿಲ್ಲ, ಕೇಳುವಂತೆಯೂ ಇದ್ದಿಲ್ಲ; ಮಹಾದೇವ ದೇಸಾಯರಿಗೆ ಇದು ಚನ್ನಾಗಿ ಗೊತ್ತಿತ್ತು. ಅದ್ದರಿಂದ ತಮ್ಮ ಪ್ರಕೃತಿಯನ್ನು ವೈದ್ಯಸಹಾಯದಿಂದ ಸುಧಾರಿಸಿಕೊಳ್ಳಬೇಕೆಂದು ಅವರು ನಿರ್ಧರಿಸಿದ್ದರು. ಸತ್ಯಾಗ್ರಹಿಯಾದವನಿಗೆ ಸೆರೆಮನೆಯಲ್ಲಿ ಜಡ್ಡುಬೀಳುವದು ನಾಚಿಕೆಗೇಡೆಂದು ಗಾಂಧೀಜಿಯವರು ಹೇಳಿದ್ದಿಲ್ಲವೆ ? ದೇಶದ ಇತಿಹಾಸದಲ್ಲೇ ಮಹತ್ತರವೂ ಪ್ರಚಂಡವೂ ಆದ ಮುಂಬರುವ ಸ್ವಾತಂತ್ರ್ಯ ಹೋರಾಟದಲ್ಲಿ ತಾವು ಚನ್ನಾಗಿ ಕೈತೋರಿಸಬೇಕೆಂದು ಮಹಾದೇವರ ಆತುರ. ನನಗೆ ಏನೇನೂ ಮನಸ್ಸಿಲ್ಲದಿದ್ದರೂ ನನ್ನನ್ನೂ ತಮ್ಮೊಡನೆ ಮುಂಬಯಿಗೆ ಅವರು ಎಳೆದುಕೊಂಡು ಹೋದರು. "ಪವಿತ್ರ ಕರ್ತವ್ಯವನ್ನು ತಪ್ಪಿಸಿಕೊಳ್ಳಕೂಡದು. ಬಾರಿ ಬಾಪುವಿಗೆ ನಮ್ಮೆಲ್ಲರ ಆವಶ್ಯಕತೆಯೂ ಇದೆ. ನಾವು ಸುಸಜ್ಜಿತರಾಗಿರಬೇಕು," ಎಂದು ಅವರು ಒತ್ತಾಯಗೊಳಿಸಿದರು. ನನಗೆ ಹೇಳದೆ ಕೇಳದೆ ಪ್ರಮುಖ ದೇಹಪರೀಕ್ಷಕರೊಬ್ಬರಲ್ಲಿ ನನ್ನ ಪರೀಕ್ಷೆಯ ಏರ್ಪಾಡನ್ನೂ ಅವರು ಮಾಡಿದರು. ಸ್ವತಃ ತಾವೂ ಅನೇಕ ಪರೀಕ್ಷೆಗಳಿಗೆ ಒಳಗಾದರು. ಆದರೆ ದೈವೇಚ್ಛೆ! ಹೃದಯದ ಪರೀಕ್ಷೆಯನ್ನು ಮಾತ್ರ ಅವರು ಮಾಡಿಸಿಕೊಳ್ಳಲಿಲ್ಲ. ಸರದಾರ ವಲ್ಲಭಭಾಯಿ ಪಟೇಲರು ಮರುದಿನ ಕಾರ್ಯಸಮಿತಿಯ ಸಭೆಗೆ ವರ್ಧಾಕ್ಕೆ ಹೊರಡುವವರಿದ್ದರು. ಅವರಿಗೆ ಮಹಾದೇವರೊಡನೆ ಕೆಲವು ಸಂಗತಿಗಳನ್ನು ದಾರಿಯಲ್ಲಿ ಚರ್ಚಿಸುವದಿತ್ತು. ಕಾರಣ ಹೃದಯದ ಪರೀಕ್ಷೆಗೆ ಶರಣುಹೊಡೆಯಬೇಕಾಗಿ ಬಂತು

## ಕೊನೆಯ ಪ್ರವಾಸ

ಗಾಂಧೀಜಿಯ ಮುಂಬಯಿ ಪ್ರವಾಸ ಅಗಸ್ಟ ೫ ಕ್ಕೆ ಗೊತ್ತುಪಡಿಸಲ್ಪಟ್ಟಿತ್ತು. ಮಹಾದೇವ ದೇಸಾಯರು ಗಂಡಾಂತರಮಯ ವನವಾಸಕ್ಕೆ ಬೇಕಾದ ಎಲ್ಲ ಪೂರ್ವೋದ್ಯೋಗವನ್ನು ಅದ್ಯಂತವಾಗಿನಡೆಸಿದರು ಅವರು ತಮ್ಮ ಡೆಸ್ಕನ್ನು ಕಿತ್ತಾಡಿ, ಅದರಲ್ಲಿದ್ದ ಮಹತ್ವದ ಕಾಗದ ಪತ್ರಗಳನ್ನು, ದಿನಚರಿ, ಟಿಪ್ಪಣಿ ಪುಸ್ತಕ ಮೊದಲಾದವುಗಳನ್ನು ಸುರಕ್ಷಿತ ಸ್ಥಳಗಳಿಗೆ ಕಳಿಸಿದರು. ತುಂಬಿಯನ್ನು ಮೀರಿಸುವ ಇಡಿ ಜೀವಮಾನದ ಕಾರ್ಯತತ್ಪರತೆಯಿಂದ ಕೂಡಿಹಾಕಿದ ಜೇನಾಗಿತ್ತು ಅದು. ಮುಂಬೈಗೆ ಹೋಗುವಾಗತಮ್ಮ ಮಗನನ್ನು ಅವರು ಕರೆದೊಯ್ದರು. ತನ್ನ ತಂದೆಯ ಅನೇಕಾನೇಕ ಗೆಳೆಯರು, ಭೂಲಾಭಾಯಿ ದೇಸಾಯರು, ಸಹಿತ, ಅವನನ್ನು ವಿಶ್ವವಿದ್ಯಾಲಯಕ್ಕೆ ಕಳಿಸಬೇಕೆಂದು ಮಾಡಿದ ಪ್ರಯತ್ನಗಳನ್ನೆಲ್ಲ ಅವನು ವಿರೋಧಿಸಿದ್ದನು. ತಂದೆಯಾದರೋ ಅವನನ್ನು ಈ ಮಹಾ ಅಗಸ್ಟ ಹೋರಾಟದಲ್ಲಿ ತೊಡಗಿಸುವದಕ್ಕಿಂತ ಅಮೂಲ್ಯವಾದುದೇನೂ ಮಗನಿಗೆ ಕೊಡುವದುಳಿದಿಲ್ಲವೆಂದು ಭಾವಿಸಿದ್ದರು. ಸೇವಾಗ್ರಾಮದಲ್ಲಿ ತಾಲಿಮೀ ಸಂಘದ ಒಂದು ಸಭೆ ತಾ. ೪ ಕ್ಕೆ ಇತ್ತು. ಅದರಲ್ಲಿ ಗಾಂಧೀಜಿ ಮಾತಾಡಿದ್ದರು. ಗಾಡಿಯಲ್ಲಿ ಮಗ ನಾರಾಯಣನಿಂದ ಅದರ ಹಿಂದುಸ್ತಾನಿ ವರದಿಯನ್ನು ಮಹಾದೇವರು ಬರೆಸಿದರು. ತಮ್ಮ ಮಗ ಆ ಕೆಲಸವನ್ನು ಅತೃಪ್ತಿಕರವಾಗಿ ಮಾಡಿಲ್ಲವೆಂಬುದನ್ನು ಕಂಡುಕೊಂಡ ಅವರಿಗೆ ಹರ್ಷವಾಯಿತು. ಅದನ್ನು ಸೂಕ್ಷ್ಮವಾಗಿ ಒರೆದು ನೋಡಿದ ಅವರು, ತಮ್ಮ ಮಗನ ಕೃತಿಗೆ ನೂರರಲ್ಲಿ ಪ್ಪತ್ತೈದು ಗುಣಗಳನ್ನು ಕೊಟ್ಟಿರುವದಾಗಿ ಮುಂದೆ ನನಗೆ ಹೇಳಿದರು.

ಮುಂದಿನ ಮೂರು ದಿನಗಳು ಎಲ್ಲ ಪಾಲಿಗೂ ಉತ್ಕಂಠತೆ, ಅವಿರತ ಶ್ರಮಗಳಿಂದ ತುಂಬಿದ್ದವು. ಮಹಾದೇವರ ಹಳೆಯ ಗೆಳೆಯರಾದ ಎಂ ಎ ಮೆಕ್ಲಿಯವರೊಡನೆ ಅವರ ಅಕಸ್ಮಾತ್ ಭೆಟ್ಟಿಯಾದಾಗ ಕೊನೆಯ ಗಳಿಗೆಯ ಶಾಂತಿ ಪ್ರಯತ್ನವನ್ನು ಮಾಡುವದೂ ಆಯಿತು. ಆದರೆ ಅದು ವಿಫಲವಾಯಿತು. ಆ ಪ್ರಯತ್ನಕ್ಕೆ ಸಂಬಂಧಿಸಿದ ಕಾಗದ ಪತ್ರಗಳು ಈಚೆಗೆ ಪ್ರಕಟಿಸಲ್ಪಟ್ಟು ಸಾರ್ವಜನಿಕ ಸೊತ್ತುಗಳಾಗಿವೆ.

## ಕೊನೆಗೊಮ್ಮೆ ಅಗಸ್ಟ ೮

ನಾವು ಅ ಭಾ ಕಾಂ ಸಮಿತಿಯ ಸಭೆಯಲ್ಲಿ ಕುಳಿತಿದ್ದೆವು. ಒಮ್ಮಿಂದೊಮ್ಮೆ ಅವರು ನನ್ನ ಕಡೆಗೆ ಹೊರಳಿದರು. "ಇಂದಿನ ರಾತ್ರಿ ಏನು ಸಂಭವಿಸುವದೆಂದು ಬಲ್ಲವರಾರು ?" ಎಂದರವರು. "ಎಲ್ಲ ಬಗೆಯ ಸುದ್ದಿಗಳೂ ಗಾಳಿಯಲ್ಲಿ ಹಬ್ಬಿವೆ. ಬಾಪೂ ನಿನ್ನೆ ಒಂದು ಅತಿ ಮಹತ್ವದ ಭಾಷಣವನ್ನು ಮಾಡಿದರು. ಇಂದು ಇನ್ನೊಂದನ್ನು ಮಾಡಲಿರುವರು. ಈ ಎರಡು ಭಾಷಣಗಳ ಸರಿಯಾದ ವರದಿಯಾಗುವದರ ಮೇಲೆಯೆ ವಿಶ್ವವ್ಯಾಪಿ ಪರಿಣಾಮಗಳು ಹೊಂದಿಕೊಂಡಿವೆ. ಇದರಲ್ಲಿ ನಾವು ಸಂದೇಹಕ್ಕೆಡೆಕೊಡೋಣ ಬೇಡ. ನೀನು ನಿನ್ನಿನ ಭಾಷಣವನ್ನು ಇದೀಗಲೆ ಸಿದ್ಧಗೊಳಿಸಿಬಿಡು. ಇಂದಿನ ಭಾಷಣವನ್ನು ನಾನ ಮನೆಗೆ ಹೋದೊಡನೆ ಬರೆಯುವೆ. "

ಆದರೆ ಅಂದು ಅ ಭಾ ಕಾಂಗ್ರೆಸ್ ಸಭೆ ಮುಗಿದ ಮೇಲೆ ನಾನು ರಾತ್ರಿ ೧೨ ಗಂಟೆಯ ಹೊತ್ತಿಗೆ ಭೆಟ್ಟಿಯಾದಾಗ ಇನ್ನೂ ಸಂದರ್ಶನಕ್ಕೆ ಬರುವವರ ಕೈಯಿಂದಲೆ ಮಹಾದೇವರು ಬಿಡುಗಡೆ ಹೊಂದಿದ್ದಿಲ್ಲ. ಒಂದು ಕ್ಷಣದ ವ್ಯವಧಾನವನ್ನು ಕೂಡ ಕಲ್ಪಿಸಿಕೊಳ್ಳುವದು ಅವರಿಗೆ ಸಾಧ್ಯವಾಗಿರಲಿ.

"ಒಳ್ಳೇದು, ಕವಡೆಯನ್ನಂತೂ ಒಗೆದಾಯಿತು. ಮುಂದೇನು ಮಾಡುವದಿದೆ ?" ನಾನು ಕೇಳಿದೆ.

"ಬಾಪೂಜಿಯವರ ಬಂಧನವಾಗುವದು ಖಂಡಿತ ಇರಲಿ, ನಾಳೆ ನಾವು ಕೈಕೈ ಹಿಡಿದು ಮುನ್ನುಗ್ಗೋಣ. ದೇವರು ನಮ್ಮಿಂದ ಯೋಗ್ಯವಾದುದನ್ನೇನಾದರೂ ಮಾಡಿಸಿಯಾನು. "

ಎಳೆಯ ನಾರಾಯಣನೂ ಕನೂ ಗಾಂಧಿಯೂ ಅವರನ್ನು ಅರ್ಧ ಗಂಟೆ ಮುಂಚೆ ಭೆಟ್ಟಿಯಾಗಿದ್ದರು. "ಇನ್ನು ನಿಮ್ಮ ಮಾತಿಗೆ ನಾವೇನೂ ಕಿವಿಗೊಡುವವರಲ್ಲ, ಕಾಕಾ," ಎಂದು ಮೊದಲನೆಯವನು ನಗುತ್ತ ನುಡಿದಿದ್ದನು. "ಅ ಭಾ ಕಾಂಗ್ರೆಸ್ಸಿನಲ್ಲಿ ಇಂದೂ ಬಾಪೂ ಹೇಳಿದ್ದಾರೆ— ಇನ್ನು ಮುಂದೆ ಪ್ರತಿಯೊಬ್ಬನೂ ತಾನೇ ತನ್ನ ಮುಂದಾಳು, ಎಂಬದಾಗಿ. ಈಗ ನಾವು ಆಝಾದರು (ಸ್ವತಂತ್ರರು) "

"ಆದರೆ ನೀವು ಬಾಪು ಹೇಳುವ ಮೊದಲೆ ಹಾಗೆ ಮಾಡಿಬಿಟ್ಟಿದ್ದೀರಿ. ನಾನಾದರೋ ನೀವು ಹೇಳುವ ಮೊದಲೆ ಒಪ್ಪಿದ್ದೇನೆ. ಮಗೂ ನಿಮ್ಮ ಸ್ವಾತಂತ್ರ್ಯವನ್ನು ಕಸಿದುಕೊಳ್ಳುವ ಇಚ್ಛೆ ನನಗಿಲ್ಲ. "

ಆದರೆ ಯಾರೂ ಬಗೆಯದ— ತಾನಂತೂ ಕನಸಿನಲ್ಲೂ ಊಹಿಸದ— ರೀತಿಯಲ್ಲಿ ತಂದೆಯಿಂದ ಸ್ವತಂತ್ರನಾಗುವ ಪಾಳಿ ಬರಲಿದೆಯೆಂದು ಆ ಹುಡುಗನಿಗೇನು ಗೊತ್ತು ?

## ಅವರು ಬಂದರು

ಮುಂದೆ ಜರಗಿದುದನ್ನು ಅವರ ಮಾತುಗಳಲ್ಲಿಯೆ ಹೇಳುವದು ಎಲ್ಲಕ್ಕಿಂತ ಉಚಿತ, ಅವರ ಮರಣಾನಂತರ ದೊರೆತ ಲಿಖಿತಗಳಲ್ಲೊಂದಾದ ದಿನಚರಿಯಲ್ಲಿ ಅದರ ಉಲ್ಲೇಖವಿದೆ.

"೯-೮-೪೨. ಮುಂಜಾನೆಯ ಪ್ರಾರ್ಥನೆಯಾದ ನಂತರ ನಾನು ಬಾಪೂಗೆ ಹೇಳಿದೆ. 'ಸುದ್ದಿಗಳ ಸುಳಿಗಾಳಿಯೆದ್ದಿದೆ. ಟೆಲಿಫೋನ ಕರೆಗಳ ಸುರಿಮಳೆಯೇ ಬಂದಿದೆ. ಎಲ್ಲವೂ ಹೇಳುವದೊಂದೆ— ಇಂದು ರಾತ್ರಿಯೆ ಬಂಧನವಾಗುವದು— ಎಂದು. ಶ್ರೀ ಅರವಿಂದು ಪಕ್ವಾಸಾರು ಹೊಸತಾಗಿ ತಂದ ಸುದ್ದಿಯನ್ವಯ ಆಗಾಖಾನ ಅರಮನೆಯ ಸುತ್ತಲು ಮುಳ್ಳು ಬೇಲಿ ಹೊಡೆಯುತಿದ್ದಾರೆ. ಅಲ್ಲಿಗೆ ಸ್ಥಾನಬದ್ಧರನ್ನು ಒಯ್ಯಲಾಗುವದು. ಮೆಕ್ಲಿಯವರಂತೂ "ನೀವು ಬಹು ಸುಂದರವಾದ ತಾಣಕ್ಕೆ ಹೋಗ್ವಿರಿ. ಅಲ್ಲಿರಲು ನನ್ನ ಮನಸು ಕೂಡ ಸಂತೋಷಪಡಬಹುದು. ಅಲ್ಲಿ ಬಂದು ನಿಮಗೆ ಭೆಟ್ಟಿಯಾಗುವೆ" ಎಂದು ಹೇಳಿಬಿಟ್ಟಿದ್ದಾರೆ. ಬಾಪೂ ಹೇಳಿದರು: 'ನಿನ್ನೆ ರಾತ್ರಿಯ ನನ್ನ ಭಾಷಣದ ನಂತರ ಅವರು ನನ್ನನ್ನು ಸರ್ವಥಾ ಬಂಧಿಸಲಾರರು.' ಆದರೆ ನನ್ನ ಮನಸಿನ ಅಸಮಾಧಾನ ಹೋಗಲಿಲ್ಲ. ಸರದಾರರ ವಿಷಯದ ಸುದ್ದಿಯನ್ನು ಟೆಲಿಫೋನ ಮೂಲಕ ತಿಳಿದುಕೊಳ್ಳಲು ಪ್ರಯತ್ನ ಮಾಡಿದೆ ಆದರೆ ಅದು ಮೌನವಾಗಿತ್ತು. ಭೀತಿ ನನ್ನನ್ನು ಅದುಮಿಬಿಟ್ಟಿತು. ನೆರೆ ಬಂಗಲೆಯಿಂದ ಟೆಲಿಫೋನ ಮಾಡಲು ಸ್ವಾಮಿ ಆನಂದರನ್ನು ಕಳಿಸಿದೆ. ಆದರೆ ಅವರು ತಕ್ಷಣ ಮರಳಿಬಂದು ಪೋಲಿಸ ಕಮಿಶನರರು ಬಂಧನಗಳನ್ನು ನೆರವೇರಿಸಲು ಬರುತಿರುವರೆಂದು ಸುದ್ದಿ ಹೇಳಿದರು. ಪೋಲೀಸ ಸುಪರಿಂಟೆಂಡೆಂಟರು ಬಂದು ಬಂಧನಗಳನ್ನು ಮಾಡಿದರು. ಮೀರಾಬೆನ್ನಳಿಗೂ ನನಗೂ ವಾರಂಟುಗಳಿದ್ದವು. ಪ್ಯಾರೇಲಾಲಗೂ ಬಾ ಅವರಿಗೂ ಮನಸಿದ್ದರೆ ಬಾಪೂ ಜೋಡಿ ಸ್ಥಾನಬದ್ಧತೆಯಲ್ಲಿರಲು ಅವಕಾಶ ಕೊಡಲಾಗಿತ್ತು. ನಿಲ್ದಾಣದಲ್ಲಿ ವಿಶೇಷ ಗಾಡಿಯೊಂದು ಕಾಯುತಿತ್ತು. ಕಾರ್ಯ ಸಮಿತಿಯ ಇಡಿ ಗುಂಪನ್ನೂ ಮುಂಬಯಿ ಪ್ರಾಂತಿಕ ಕಾಂಗ್ರೆಸ್ ಸಮಿತಿಯ ಸದಸ್ಯರನ್ನೂ ಆಗಲೇ ಅಲ್ಲಿಗೊಯ್ದು ತುಂಬಲಾಗಿತ್ತು.

"ನಮ್ಮನ್ನು ಚಿಂಚವಡದಲ್ಲಿ ಕೆಳಗೆ ಇಳಿಸಿದರು ಕಾರ್ಯ ಸಮಿತಿಯ ಸದಸ್ಯರನ್ನು ಮೊದಲು

—ಪುಟ ೬ಕ್ಕೆ

## ವಾರದ ಕತೆ

# — ಮಲ ಮಗಳು —

............................ ಬರೆಹಗಾರ: ಶ್ರೀರಾಮ ಪಾಟೀಲ, ವಿಜಯಪುರ ............................

ಅವಳನ್ನು ಕರೆತರಲು ಸಿದ್ಧತೆ ನಡೆಸಿದನು. ಅವನ ಹೆಸರು ಗೋಪಾಲ; ಅವಳ ಹೆಸರು ಗೀತಾ. ಒಂದು ಮನೆ ಹಿಡಿದು, ಭಾಂಡಿಗಳಲ್ಲಿ ಕೆಲವು ಕಲೆಹಾಕಿ, ಕೆಲವು ಕಡ ತಂದು, ಕೆಲವನ್ನು ಕೊಂಡು ಇತರ ಸಾಹಿತ್ಯ ಸಂಭಾರಗಳನ್ನು ಸಂಗ್ರಹಿಸಿ ರಜೆ ತಕ್ಕೊಂಡು ಮಾವನ ಮನೆಗೆ ಹೋದನು.

ಶಾಮನು ಮೆಟ್ಟಲುಗಳನ್ನೇರಿ ಕೋಣೆಗೆ ಹೋದನು. ಅಲ್ಲಿ ರಾಯರು ಗೋಪಾಲನನ್ನು ಕಂಡ ಕೂಡಲೆ, "ಓಹೋ! ಯಾವಾಗ ಬಂದೆ? ಕೂತುಕೋ...." ಎಂದು ಅಂದರು. ಮತ್ತೆ, "ನಾನು ಈಗ ಕಚೇರಿಗೆ ಹೋಗಬೇಕು.... ಯಾವ ಗಾಡಿಗೆ ಬಂದೆ?.... ಏ ಕುಚೇಲ ಅಳಿಯದೇವರು ಬಂದಾರೆಂದು ಹೇಳು .... ಮತ್ತೇನು? ನನ್ನ ಊಟವಾಗಿದೆ.... ನಿನ್ನ ಸ್ನಾನವಾಗಿದೆಯೆ?... ನೀರು ತೋಡಲು ಕುಚೇಲನಿಗೆ ಹೇಳುತ್ತೇನೆ ಸ್ನಾನ ಮಾಡಿ ಊಟಕ್ಕೇಳಿರಿ. ನಾನು ಸಂಜೆಗೆ ಬರುವೆ." ಎಂದು ಒಂದೇ ಉಸುರಿಗೆ ಮಾತು ಸುರಿದು ಕೆಳಗಿಳಿದು ಹೋದರು. ಒಂದೆರಡು ನಿಮಿಷಗಳಲ್ಲಿಯೇ ಅವರ ಮೋಟರು ದೂರ ಹರಿದು ಹೋದಂತೆ ಕೇಳಬಂದಿತು.

ಮಾವ ಹೋದ ಮೇಲೆ ಗೋಪಾಲನು ತನ್ನ ಅರಿವೆಗಳನ್ನು ಕಳೆಯುತ್ತ ಬದಿಯಲ್ಲಿರುವ ಗೂಟಕ್ಕೆ ಹಾಕುತ್ತ ಸುತ್ತಲೂ ನಿರೀಕ್ಷಿಸಿದನು. ಅನೇಕ ಕುರ್ಚಿಗಳಿಂದ ಕೂಡಿದ ಆ ಕೋಣೆಯು ರಮಣೀಯವಾಗಿ ಶೃಂಗರಿಸಲ್ಪಟ್ಟಿತ್ತು. ಅಲ್ಲಲ್ಲಿ ಅವರ ಮನೆಯವರ ಚಿತ್ರಗಳಿದ್ದವು. ಕೆಲವು ಇತ್ತೀಚಿಯವು, ಕೆಲವು ನಾಲ್ಕೈದು ವರ್ಷ ಹಿಂದಿನವು. ಆದರೂ ಇವಾವುದರಲ್ಲಿಯೂ ತನ್ನ ಹೆಂಡತಿಯ ಚಿತ್ರವಿರಲಿಲ್ಲ. ಗೋಪಾಲನಿಗೆ ಆಶ್ಚರ್ಯವಾಯಿತು. ಮೊನ್ನೆ ಹುಟ್ಟಿದ ಹಸುಗೂಸಿನ ಚಿತ್ರವು ಮೇಜಿನ ಮೇಲ್ಭಾಗದಲ್ಲಿ ನೇತಾಡುತ್ತಿತ್ತು. ಅವರ ಹೆಂಡತಿಯ ತೈಲಚಿತ್ರವು ಬಾಗಿಲದ ಮೇಲ್ಭಾಗದಲ್ಲಿ ವಿರಾಜಮಾನವಾಗಿತ್ತು. ತನ್ನ ಹೆಂಡತಿಯ ಒಂದು ಚಿತ್ರವಾದರೂ ಇರಬಾರದೇ? ಅವಳ ಸಂಪೂರ್ಣ ಚಿತ್ರ ಒತ್ತಟ್ಟಿಗಿರಲಿ, ಅವಳ ಒಂದು ಮೋರೆಯ ಚಿತ್ರವಾದರೂ....

"ಇವಳು ಇವರ ಮಗಳೊ? ಸಾಕು ಮಗಳೊ? ಏನು ಹೊಟ್ಟೆ ಹಾಕಿಕೊಂಡು ತಂದಿದ್ದಾರೋ?" ಗೋಪಾಲನು ತನ್ನಷ್ಟಕ್ಕೆ ತಾನೇ ಪುಟಪುಟಿಸಿದನು.

ಗೋಪಾಲನು ಅರಿವೆ ಕಳೆವ ಹೊತ್ತಿನಲ್ಲಿ ಅವಳು ಆಗ ಬರುವಳು ಈಗ ಬರುವಳು ಎಂದು ಹಾದೀ ನೋಡಿದನು. ಅವಳು ಬರಲಿಲ್ಲ. ಉಸ್ಸೆಂದು ಒಂದು ಕುರ್ಚಿಯಲ್ಲಿ ದೊಪ್ಪನೆ ಬಿದ್ದು ಬದಿಯಲ್ಲಿದ್ದ ಒಂದು ಮಾಸಿಕವನ್ನು ಕೈಗೆಳೆದನು. ಕುಚೇಲನು, "ನೀರು ತೋಡಿದ್ದೇವೆ" ಎಂದು ಹೇಳಿದನು. ಗೋಪಾಲನು ಕೆಳಗಿಳಿದು ಬಚ್ಚಲು ಮನೆಗೆ ಹೋದನು. ಅವಳು ಎದುರು ಬರುತ್ತಿದ್ದಳು. ಅವನು ಅತ್ತಿತ್ತ ನೋಡಿ ಅವಳ ಸೆರಗು ಹಿಡಿದು ಎಳೆದು ತಡೆ ಎಂದನು. ಆದರೆ ಆ ಗೊಂದಲದಲ್ಲಿ ಅವಳ ಕೈಯಲ್ಲಿದ್ದ ಕಾಚಿನ ಪಾತ್ರೆಯು ಜಾರಿ ಹಾಸುಗಲ್ಲಿನ ಮೇಲೆ ಬಿದ್ದು ಘಟೂರನೆ ಒಡೆದು ಚೂರುಚೂರಾಯಿತು. ಇಬ್ಬರೂ ಅವಾಕ್ಕಾಗಿ ನಿಂತರು. ಆ ಸಪ್ಪಳ ಕೇಳಿ ಅತ್ತೆಯು ಅಲ್ಲಿಗೆ ಬಂದಳು.

"ಇದೇನು?"

"ಕಲ್ಲು ಜಾರಿಸಿತು. ಕೈಕೊಡವಿತು" ಗೀತಾ ನುಡಿದಳು.

"ಇರಲಿ, ಇತ್ತ ಬಾ" ಅತ್ತೆ ನುಡಿದಳು.

ಗೀತಾ ಒಳಕ್ಕೆ ಹೋದಳು. ಒಡೆದ ಕಾಚಿನ ಪಾತ್ರೆಯು ಚೂರುಗಳನ್ನು ಆರಿಯಲು ಅತ್ತೆ ಅವಳನ್ನು ಕಳಿಸಬಹುದೆಂದು ನೆನಿಸಿದ್ದನು. ಆದರೆ ಕುಚೇಲನು ಬಂದು, ಅದನ್ನು ಕಸಬರಿಗೆಯಿಂದ ಆರಿಸಿ ಒಂದು ಮೂಲೆಯಲ್ಲಿ ಹಾಕಿಕೊಂಡು ಹೋದನು. ಗೋಪಾಲನ ಕೈ ಕ್ಲೇಶದಿಂದ ನಡುಗಿತು. ಕಲ್ಲು ತಿಕ್ಕಿಕ್ಕಿ ತಿಕ್ಕಿ ಅವನ ಕೈ ಕಿತ್ತಿ ಹತ್ತಿತು. ನೋವಾದ ಕೂಡಲೆ ತುಟಿ ಅಗಲಿದವು. ತಲೆಯ ಮೇಲೆ ನೀರು ಎರೆಯಲು ಹೋದ ಕೈಯು ತಂಬಿಗೆಯು ತಲೆಯ ಮೇಲೆ ಕುಕ್ಕರ ಬಡೆಯಿತು. ತಲೆಯ ಮೇಲೆ ಗೇಣುದ್ದ ಕೂದಲು ಇಲ್ಲದಿದ್ದರೆ ಅವನ ತಲೆಗೆ ಬುಗುಟಿಯೆದ್ದಿಸಿ, ಕೆಲಸ ಮತ್ತು ಮರುಗೆಲಸ ಸರಿ ಮತ್ತು ಮರುನಿಟ್ಟಿನವೆಂಬ ನ್ಯೂಟನನ ತತ್ವವನ್ನು ಸಿದ್ಧಪಡಿಸುತಿದ್ದವು.

ಗೋಪಾಲನು ಸ್ನಾನವನ್ನು ಮುಗಿಸಿ ಮೇಲೆ ಹೋಗಿ ಬಟ್ಟೆಯನ್ನು ಉಟ್ಟುಕೊಂಡು ಕೆಳಕ್ಕೆ ಬಂದು ಊಟಕ್ಕೆ ಕುಳಿತನು. ಅತ್ತೆ ಬಡಿಸುತ್ತಿದ್ದಳು. ಅವನ ತೆರೆಗಣ್ಣಿನ ಬಗೆದಿಳಿದ ಅತ್ತೆ,

"ಗೀತಾ ಬಕ್ಕರೆ ಬಡಿಯುತ್ತಾಳೆ. ಮತ್ತೆ ನಾಳೆ ಬೇಕಲ್ಲ ನಿಮಗೆ ಬಡಿದು ಹಾಕಲು," ಅತ್ತೆ ನುಡಿದಳು.

"ಇಂದು ಅದರ ಪ್ರಥಮ ಪಾಠವೇನು?" ಹುದುಗಲಾರದ ಸಿಟ್ಟನ್ನು ಹತ್ತಿಕ್ಕುತ್ತ ಗೋಪಾಲನೆಂದನು.

"ಇದು ನಮ್ಮ ಮನೆಯಲ್ಲಿಯ ಕೊಸೆಯ ಶಿಕ್ಷೆ" ಅತ್ತೆ ಭುಸುಗುಟ್ಟಿದಳು.

ಶಿಕ್ಷೆ! ಅಹುದು ಶಿಕ್ಷೆಯಲ್ಲದೆ ಮತ್ತೇನು? ಮಕ್ಕಳ ಹೆಗಲಿಗೆ ನೊಗ ಹೊರಿಸಿ ತಾನು ಸವಾರಿ ಮಾಡುವ ತಾಯಿಗೇನೆನ್ನಬೇಕು. ಗೋಪಾಲನು ಅತ್ತೆಯ ಕಡೆಗೆ ನೋಡಿದನು. ಅವಳ ಮೋರೆಯ ಮೇಲೆ ಮರುಕದ ಯಾವ ತರಂಗವೂ ಚಿಮುಕಲಿಲ್ಲ. ತಿರುಗಿ ತಾನು ಮಾಡಿದ್ದೇ ಸರಿಯೆನ್ನುವ ದರೋಡೆಖೋರನ ಮದಾಂಧತೆಯಿತ್ತು, ಆ ಹೆಣ್ಣು ಮೊಗದಲ್ಲಿ.

ಊಟಮಾಡಿ ಗೋಪಾಲನು ಮತ್ತೆ ಮೇಲೆ ಹೋದನು. ಅಗಲೇ ಎರಡು ಹೊಡೆದಿತ್ತು. ಕುರ್ಚಿಯ ಮೇಲೆ ಕುಳಿತು ಮತ್ತೆ ಅವಳ ವಿಚಾರದಲ್ಲಿಯೇ ತಲ್ಲೀನನಾದನು. ಅವಳು ಇದೇಕೆ ಬರಲೊಲ್ಲಳು? ಏನು ನಾಚಿಕೆಯೋ?? ಏನೋ.

.....? ಅವನಿಗೆ ಅರ್ಥವಾಗಲಿಲ್ಲ. ಹೊಟ್ಟೆ ಭಾರವಾಗಿತ್ತು. ಕೈಯಲ್ಲಿ ಹಿಡಿದ ಮಾಸಪತ್ರಿಕೆ ನಿದ್ದೆ ತಂದಿತು.

ಸಂಜೆಯಾಯಿತು. ತಿರುಗಾಡಿ ಬಂದ ಮೇಲೆ ಮಾವನ ಕೂಡ ಊಟವಾಯಿತು. ಗೋಪಾಲನು ತನಗೆ ಸಿದ್ಧಪಡಿಸಿದ ಕೋಣೆಗೆ ಹೋದನು. ಅವಳ ದಾರೀ ನೋಡಿದನು. ಹತ್ತಾಯಿತು ಹನ್ನೊಂದಾಯಿತು.... ಹನ್ನೊಂದೂವರೆ.... ಹನ್ನೆರಡಕ್ಕೆ ಹತ್ತು ನಿಮಿಷ.

ಖಿನ್ನಮನಸ್ಕನಾಗಿ ಕಿಟಿಕಿಯಿಂದ ಇಣಿಕಿಕ್ಕಿ ಹೊರಕ್ಕೆ ನೋಡಿದನು. ಆಕಾಶದಲ್ಲಿ ಚಿಕ್ಕೆಗಳು ಮಿನಗುತ್ತಿದ್ದವು. ಅತ್ತೆಯು ಅಸ್ತವಾಗಿರುವದರಿಂದ ಈ ಸೊಸೆಗಳ ಚಲ್ಲಾಟ ನಡೆದಿರುವದೆಂದು ಗೋಪಾಲನಿಗೆ ತೋರಿತು.

ಊರಿನ ಒಂದು ಮೂಲೆಗೆ ಸಿಡಿಮದ್ದು ಆಕಾಶಕ್ಕೆ ಹಾರುತ್ತಿತ್ತು. ಸಿಡಿಪಟಾಕಿಯ ಕೆಂದರಿಸಿದ ಬಣ್ಣವು ನಿಧಾನವಾಗಿ ಮೇಲಕ್ಕೇರಿ ಫಟ್ಟೆಂದ. ಮುದಿಯಾಗಿ ರೇಡಿಯಮಿನ ತುಂಡುಗಳಂತೆ ಒಂದರಗಳಿಗೆ ಆಕಾಶವನ್ನು ಬೆಳಗಿ ತುಂತುರಹನಿಗಳಂತೆ ಕೆಳಗೆ ಬೀಳುತ್ತಿದ್ದವು. ಅದನ್ನು ನೋಡುತ್ತ ನಿಂತಿದ್ದ ತಿಟ್ಟುನಿಟ್ಟಿನ ತಂತಗಳ "ಹೋ," ಎಂಬ ಸ್ವರವು ಬೆಳಕಿನ ಮಾನವಂತೆ ಹೆಚ್ಚುಕಡಿಮೆಯಾಗಿ ಕೇಳ ಬರುತ್ತಿತ್ತು. ಅದು ನಿಂತ ಮೇಲೆ ಗೋಪಾಲನು ಹಿಂದೆ ಮೋರೆ ಮಾಡಿದನು ಅವಳ ಅಸ್ಪಷ್ಟ ಮೂರ್ತಿಯು ಸಮೀಪಕ್ಕೆ ಬಂದಿತು. ಮೆಲ್ಲನೆ ಒಳಕ್ಕೆ ಬಂದು ಬಾಗಿಲ ಮುಚ್ಚಿ ಹತ್ತಿರ ಬಂದಳು.

"ಇದೇಕೆ ಇಷ್ಟೊತ್ತು? ಎಲ್ಲರನ್ನು ತಪ್ಪಿಸಿ ಮಲಗಿಸಿದ ಮೇಲೆ ನಿನಗೆ ಪಾಳಿಗಳು ಅಪ್ಪಣೆಯೇನು?" ಗೋಪಾಲನು ಸಿಡಿಮಿಡಿಗೊಂಡು ನುಡಿದನು.

ಗೀತಾ ಮಾತಾಡಲಿಲ್ಲ. ಒಂದು ಭಾವಗೀತದ ಉದ್ರೇಕದಂತೆ ಅವನ ಕೊರಳಿಗೆ ತೆಕ್ಕೆ ಹಾಕಿದಳು.....

• •

ಇಬ್ಬರೂ ಬೆಳಗಾವಿಗೆ ಬಂದರು. ಗೋಪಾಲನು ಮರು ದಿನ ಊಟ ಮಾಡಿ ಮುನಸಿಪಾಲಿಟಿಗೆ ಹೋದನು. ಆ ದಿನ ಅವನಿಗೆ ಮತದಾನದ ಯಾದಿ ತಯಾರಿಸಬೇಕಾಗಿದ್ದುದರಿಂದ ಬೇಗನೇ ಕೆಲಸ ಮುಗಿಯಲಿಲ್ಲ. ಆ ಮತದಾನ ಯಾದಿಯಲ್ಲಿ ಅನೇಕ ಕುಂದುಕೊರತೆಗಳು ಕಂಡವು. ಚುನಾವಣೆಗೆ ಈ ಆಡಂಬರವೇಕೆ? ಮತಾಧಿಕಾರಿಗಳೆಲ್ಲರನ್ನು ಒಂದು ಬೈಲಿಗೆ ಬರಹೇಳಿ ಕೈಯೆತ್ತಿಸಿದರಾಯಿತು. ಈ ಯಾದಿಯಾಕೆ? ಅದನ್ನು ಪ್ರಸಿದ್ಧಿಸಲೇಕೆ? ಆ ಮೇಲೆ ಗುಪ್ತಮತದಾನವೇಕೆ? ಇವೆಲ್ಲ ವಿಸ್ತೃತ ವಿಧಾನಗಳು ಒಬ್ಬರೊಬ್ಬರಲ್ಲಿಯ ಅವಿಶ್ವಾಸವನ್ನು ತೋರಿಸುವ ಕಾರಣಗಳೆಂದು ಗೋಪಾಲನು ಬಗೆದನು. ಅವನ ಕೆಲಸ ಮುಗಿಯಬೇಕಾದರೆ ಸಂಜೆಯು ಆರಾಯಿತು. ತೇಕುತ್ತ, ಮುಗ್ಗುತ್ತ, ಎಡರುತ್ತ, ಮನೆಯ ಕಡೆಗೆ ಹೊರಟನು. ಹಸಿವು ವಿಪರೀತವಾಗಿತ್ತು. ಹತ್ತು ವರುಷದಿಂದಲೂ ತರಿಸಿ ಕುಡಿಯುತ್ತಿದ್ದ ಫಲಾರದ ಅಂಗಡಿಯ ಚಹವು ಇಂದು ಅವನಿಗೆ ಕಹಿಯಾಗಿ ನಾಲಿಗೆಗೆ ರೇಜಿಡಿಸಿತ್ತು. ಈಗ ಯಾರು ಕರೆದರೂ ಅವನು ಬರುವಂತಿರಲಿಲ್ಲ. ಮನೆಯ ಹೊಸತಿಲವನ್ನು ದಾಟಿದ ಕೂಡಲೆ ಅವನಿಗೆ ತಾನು ಬೇರೆ ಮನೆಯಲ್ಲಿ ಸೇರಿದೆನೇನೋ ಎಂದು ಎನಿಸಿತು. ಆದರೆ ಇಲ್ಲ! ಎದುರಿಗೆ ಅವನ ಹೆಂಡತಿ ಪ್ರಸನ್ನವದನಳಾಗಿ ಅವನನ್ನು ಎದುರಿಸಿದ್ದಳು. ಮನೆಯನ್ನು ಸಾರಿಸಿ, ಉಡುಗಿ, ಸಾಮಾನುಗಳನ್ನು ವ್ಯವಸ್ಥಿತವಾಗಿ ಇಟ್ಟು, ಅಲ್ಲಲ್ಲಿ ಚಿತ್ರಗಳನ್ನು ತೂಗಹಾಕಿ ಪಡಸಾಲೆ, ನಡುಮನೆ ಮತ್ತು ಅಡುಗೇಮನೆಯನ್ನು ಅದಳು ಕನ್ನಡಿಯನ್ನಾಗಿ ಮಾಡಿದ್ದಳು. ಅರಿವೆಯನ್ನು ತೆಗೆದು ಕೈಕಾಲು ತೊಳೆದು, ಮೊದಲು ಅಡುಗೇಮನೆ ಮತ್ತು ಪಡಸಾಲೆಯನ್ನು ಕ್ರಮವಾಗಿ ನೋಡಿದನು. ಎಲ್ಲವೂ ಒಂದೇ ಬಗೆ. ಒಂದೇ ಅಚ್ಚುಕಟ್ಟುತನ. ಒಂದೇ ಕೈಚಳಕ ಅವನಿಗೆ ಆನಂದವಾಯಿತು.

"ನನ್ನ ಚಿನ್ನ! ನೀನು ಹೀಗಿರುವೆಯೆಂದು ನನಗನಿಸಿರಲಿಲ್ಲ." ಗೋಪಾಲನೆಂದನು.

"ಮತ್ತೆ ಹೇಗೆ ತಿಳಿದಿದ್ದಿರಿ?"

ದೊಡ್ಡ ಮನೆತನದ ನೀನು ಇವೆಲ್ಲ ಕೆಲಸಗಳನ್ನು ಕೀಳೆಂದು ಕಡೆಗಣಿಸಬಹುದೆಂದು ಎನ್ನಿಸಿತ್ತು. ನಾನು ಎಲ್ಲವಕ್ಕೂ ಆಳುಗಳನ್ನಿಡಬೇಕಾಗಬಹುದೆಂದು ತಿಳಿದಿದ್ದೆನು."

ಗಿಡದಲ್ಲಿಯ ಎತ್ತರದ ಕಾಯಿಗಳೇ ಹುಳ್ಳುರುಚಿಕರವಿರುತ್ತವೆ. ನಿಲುಕುವ ಕಾಯಿಗಳಿಗೆ ಅನೇಕರು ಕಲ್ಲು ಬೀಸುತ್ತಾರೆ."

"ಎಲಾ ಕಳ್ಳೀ! ಮಾತಿನಲ್ಲಿ ಕೂಡ ಬಂಟಳು." ಎನ್ನುತ್ತ ಅವಳ ಕೈ ಹಿಡಿದನು. ಆದರೆ ಅದೇನು! ಕೈಯಲ್ಲೊಂದು ಉಸುಬುಗಲ್ಲು ಹಿಡಿದಂತಾಯಿತು. ಗೋಪಾಲನು ಅವಳ ಅಂಗೈ ಕಡೆಗೆ ನೋಡಿದನು. ಅಂಗೈ ಮತ್ತು ಬೆರಲುಗಳ ಮೇಲೆ ಅನೇಕಾನೇಕ ಗೆರೆಗಳು ವಿವಿಧಾಕಾರಗಳಿಂದ ಅಡ್ಡತಿದ್ದವಾಗಿ ಮೂಡಿದ್ದವು. ಕೂರಲಗಿನಿಂದ ಅಂಗೈ ತುಂಬ ಗೀರುಗಳನ್ನು ಹಾಕಿ ಎರೆಮಣ್ಣು ತುಂಬಿದಂತೆ ಕೈಯು ಕಾಣುತಿತ್ತು. ಅಂಗೈ ಕಾಗದದ ಮೇಲೆ ಅವಿವೇಕಿ ಹುಡುಗನು ಗೀಚಿದ ಸೀಸಗೆರೆಗಳಂತೆ ಕೈಯೆಲ್ಲವೂ ಚಿತ್ರವಾಗಿದ್ದಿತು. ಮಳೆಯಾಗಿ ಒಣಗಿದ ಎರೆಯ ಪ್ರದೇಶದಂತೆ ಕೈಯು ಹಕ್ಕಳೆಗಟ್ಟಿದ್ದಿತು.

"ಅಲ್ಲಾ-ನಿಮ್ಮ ಮನೆಯಲ್ಲಿ ನೀನೇ ಒಕ್ಕಲಗಿತ್ತಿಯೋನೇ? ಕೈಗಳಿಷ್ಟೇಕೆ ಒಡೆದಿವೆ?"

"ಏನೂ ಇಲ್ಲ!" ಕೈಕೊಸರಿಕೊಳ್ಳುತ್ತ ಅವಳೆಂದಳು. "ನನ್ನ ಪ್ರಕೃತಿ ಉಷ್ಣವಾದುದು. ಅದಕ್ಕೆ ಕೈಕಾಲು ಒಡೆದಿರುವವು. ನೋಡಿರಿ." ಕಾಲು ತೋರಿಸುತ್ತ ಎಂದಳು. "ತನ್ನ ಕಾಲು ಎಷ್ಟು ಒಡೆದಿವೆ."

ಅವಳ ಕಾಲ ಹಿಮ್ಮಡವು ಬಿರುಕುಬಿಟ್ಟಿತ್ತು. ಹಾಗೆ ಕೆಲ ಪ್ರಕೃತಿಗಳಿಗೆ ಬಿರುಕುಬಿಟ್ಟರೂ ಕೈಗೆ ಈ ರೀತಿ ಬಿರುಕು ಬೀಳುವುದನ್ನು ನೋಡಿದುದು, ಕೇಳಿದುದು, ಇದೇ ಮೊದಲ ಸಲ.

"ಅಲ್ಲ ನಿಮ್ಮ ತಾಯಿ ನಿನಗೇಕೆ ಇಷ್ಟು ಕೆಲಸ ಹಚ್ಚುವರು? ನಿಮ್ಮ ಮನೆಗೆ ಬಂದಾಗ ಒಂದು ಸಾರೆ ಕೂಡ ನಿನ್ನೊಡನೆ ಮಾತನಾಡಲು ನನಗೆ ಸಿಕ್ಕಲಿಲ್ಲ. ನಿನ್ನ ತಾಯಿ ನಿನ್ನ ಮೇಲೆ ಇಷ್ಟೊಂದು ಪ್ರೇಮವನ್ನು ಯಾಕೆ ತೋರಿಸುವಳೋ ನನಗೆ ತಿಳಿಯದು.... ನಾಳೆನಿಂದ ನೆರೆಮನೆ ಒಕ್ಕಲಗಿತ್ತಿಗೆ ಹೇಳಿಬಿಡು. ನನ್ನ ಮನೆಗೆ ಮುಸುರೆ ಒಗೆತಕ್ಕೆ ಬರಬೇಕೆಂದು."

"ಬೇಡ. ಸುಮ್ಮನೆ ಏಕೆ?.... ನಿಲ್ಲಿರಿ. ಮುಂಜಾನೆಯಿಂದ ನೀವು ಏನೂ ತಿಂದಿಲ್ಲ. ಚಹ ಮಾಡುತ್ತೇನೆ....." ಎಂದು ಒಳಕ್ಕೆ ಹೋದಳು.

ಂ ಂ ಂ

ದೀವಳಿಗೆ ಸಮೀಪಿಸಿತು. ಅದು ಹತ್ತರ ಸುಳಿದಂತೆ ಗೀತೆಗೆ ಆನಂದವಾಗಹತ್ತಿತು. ಅವಳು ಬಂದು ಈಗ ಒಂದು ವರುಷ ಮುಗಿಯುತಿತ್ತು. ಅದುದರಿಂದ ತವರುಮನೆಗೆ ಹೋಗುವ ಸಿದ್ಧತೆ ನಡಿಸಿದಳು. ಆ ತನ್ನ ಗೆಳತಿಯರು, ತನ್ನ ಮನೆ, ತನ್ನ ತಂದೆ ಅಣ್ಣತಮ್ಮಂದಿರುಗಳನ್ನು ಮತ್ತೆ ಕಂಡು ಅವರೊಡನೆ ಚಕ್ಕಂದವಾಡುವೆನಲ್ಲಾ ಮತ್ತೆ ಹುಡುಗೆಯಾಗಿ ಅವರೊಡನೆ ಅಡಿ ವಲಿಯ ಬಹುದಲ್ಲ ಎಂದು ಅವಳಿಗನಿಸಿತು.

ಗೋಪಾಲನು ಕೂಡ, "ತನ್ನ ಮಾವ ದೊಡ್ಡವ. ಅಳಿಯತನಕ್ಕೆ ತನ್ನನ್ನು ಕರೆಕಳುಹುವನು," ಎಂದು ತಿಳಿದುಕೊಂಡನು ಅವನಿಗೇನು ಕೇಳಲಿ? ಏನು ಬಿಡಲಿ? ಎಂದು ವಿಚಾರಿಸಹತ್ತಿದನು. ಅಳಿಯತನಕ್ಕೆ ಹೋಗಿರುವಂದೆ ಅನುಭವಿಕರನ್ನು ಅದರ ಬಗ್ಗೆ ವಿಚಾರಿಸಬೇಕೆಂದೂ ಅದೇ ವರುಷ ಮದುವೆಯಾದ ತನ್ನ ಗೆಳೆಯರ ಕಾರ್ಯಕ್ರಮವನ್ನರಿತುಕೊಳ್ಳಬೇಕೆಂದೂ ನಿರ್ಧರಿಸಿದನು.

ದಿನಗಳು ಕಳೆದಂತೆ ಗೋಪಾಲನ ನಡತೆಯು ಮಾರ್ಪಡಹತ್ತಿತು. ಸಿಟ್ಟುಸೆಡವುಗಳು ಆರಂಭವಾದವು ಒಂದು ದಿನವಂತೂ ಹೆಂಡತಿಗೆ ಕೇಳಿಯೇ ಬಿಟ್ಟನು.

"ನಿಮ್ಮ ತಂದೆ ನನಗೆ ಅಳಿಯತನ ಮಾಡಬಾರದೇ ?"

"ಮಾಡಬೇಕು."

"ನನ್ನ ಗೆಳೆಯರೆಲ್ಲರೂ ಇದೇ ವರುಷ ಮದುವೆಯಾದವರು ಅಳಿಯತನಕ್ಕೆ ಊರಿಗೆ ಹೋಗಿರುವರು. ಅವರೆದುರಿಗೆ ನಾನು ಮೋರೆ ಹೇಗೆ ತೋರಿಸಲಿ ? ನನಗೆ ಮೋರೆ ಕೆಳಗೆ ಹಾಕುವಂತಾಯಿತು."

"ನಿಮ್ಮ ತಂದೆಗೆ," ಆಕೆ ತಮ್ಮ ತಂದೆ ಇರುವ ದಿಕ್ಕಿನ ಕಡೆಗೆ ನೋಡುತ್ತ ಅಂದಳು. "ಅನೇಕರು ಮಕ್ಕಳು! ಎಲ್ಲರಿಗೂ ಅಳಿಯತನ ಮಾಡಲು ಹೇಗೆ ಸಾಧ್ಯ ?"

"ಎಲ್ಲ ಅಳಿಯರನ್ನೂ ಒಂದೇ ಸಮನಾಗಿ ನಡೆಸಲು ಸಾಧ್ಯವಾಗದಿದ್ದರೆ ಇಷ್ಟು ಹೆಣ್ಣು ಹಡೆಯಬೇಕೇಕೆ?"

"ಅಹುದು!" ಅವಳ ಕಣ್ಣುಗಳಲ್ಲಿ ನೀರು ಹನಿಗೂಡಿದವು. "ನನಗೂ ಎಷ್ಟೋ ಸಾರೆ ಹಾಗೇ ಅನ್ನಿಸಿದೆ. ನಾನು ಹುಟ್ಟದಿದ್ದರೆ ಚನ್ನಾಗಿತ್ತು ಎಂದು" ಆ ಮೇಲೆ ತಡೆಯಲಾರದೆ ಕಣ್ಣೀರು ಸುರಿಸಿದಳು.

"ನನಗೇನು ಹಾಗೆ ದುಡ್ಡಿನ ಮೇಲೆ ಆಶೆಯಿಲ್ಲ, "ಗೋಪಾಲನೆಂದನು." ಆದರೂ ಉಪಚಾರಕ್ಕಾದರೂ ಕರೆಕಳುಹಬಹುದಿತ್ತಲ್ಲ. ಎಂದು ಅನ್ನಿಸಿತು."

ಟಪಾಲದ ಆಳು ಒಂದು ಓಲೆಯನ್ನು ಎಸೆದು ಹೋದನು. ಮಾವನ ಕಡೆಯಿಂದ ಓಲೆ ಬಂದಿತ್ತು.

"ನಿಮ್ಮ ತಂದೆ ಓಲೆ ಬರೆದಿದ್ದಾರೆ."

"ನಾನು ಹೇಳಿದ್ದಿಲ್ಲವೇ ? ಅವರು ಎಂದೂ ಹಾಗೆ ಮಾಡುವವರಲ್ಲ ಎಂದು" ಅಳುವ ಮೋರೆಯನ್ನು ನಗುವಂತೆ ತಿದ್ದಿ ಗೀತಾ ನುಡಿದಳು.

"ಗೋಪಾಲನು ಓಲೆಯನ್ನು ಒಡೆದು ನೋಡಿದನು, ಅದರಲ್ಲಿ ಪತ್ರವಿರಲಿಲ್ಲ. ಆದರೆ ಕೆಂಪು ಬಣ್ಣದ ಅಚ್ಚಾದ ಒಂದು ಹಾಳೆಯಿತ್ತು. ಅದನ್ನು ಓದಿ "ಪಿಸ್" ಎಂದು ತಿರಸ್ಕಾರದಿಂದ ಅವಳೆಡೆ ಎಸೆದನು. ಅವಳು ಅದನ್ನು ಓದಿ ಚಪ್ಪಾಳೆಯಿಕ್ಕುತ್ತ "ರಂಗನ ಮದುವೆ! ನಾಳಿನ ಆದಿತ್ಯವಾರ!! ಇನ್ನು ಎಂಟೇ ದಿನಗಳಲ್ಲಿ!!!" ಗಂಡನೆಡೆಗೆ ತಿರುಗಿ ಅವಳು ನುಡಿದಳು. "ನಾನು ಊರಿಗೆ ಎಂದು ಹೋಗಲಿ."

"ನಿನ್ನನ್ನು ಊರಿಗೆ ಕಳಿಸುವದಿಲ್ಲ," ಸಿಟ್ಟಿನ ಮೊಗದಿಂದ ಗೋಪಾಲನು ಗುರುನುಡಿದನು.

"ನಿನ್ನನ್ನು ಊರಿಗೆ ಕಳಿಸುವದಿಲ್ಲ! ಯಾಕೆ?"

ಗೋಪಾಲನು ಚೀರಿ ನುಡಿದನು "ಇದೇನು ನಿಮ್ಮ ತಂಗಿಯರು ಕರೆಯುವ ಲಗ್ನ."

—ಮುಗಿಯಲಿಲ್ಲ



## ಮುಂಬರುವ ಮಹಾಸಭೆ

ಅಖಿಲ ಕರ್ನಾಟಕಸ್ಥರ ಮಹಾಸಭೆ ಇದೇ ೩೧ ನೇ ತಾರೀಕು ದಾವಣಗೆರೆಯಲ್ಲಿ ಕೂಡಬೇಕೆಂದು ಗೊತ್ತಾಗಿದೆ. ಮದ್ರಾಸ ಮಂತ್ರಿಗಳಾದ ಶ್ರೀ ಕೆ.ಆರ್. ಕಾರಂತರು ಮಹಾಸಭೆಯ ಪ್ರಾರಂಭೋತ್ಸವವನ್ನು ಜರುಗಿಸುವರು. ಮುಂಬಯಿಯ ಒಕ್ಕಲತನ ಮಂತ್ರಿಗಳಾದ ಶ್ರೀ ಮಲ್ಲನಗೌಡರು ಪಾಟೀಲ ಇವರು ಅಧ್ಯಕ್ಷತೆ ವಹಿಸುವರು. ಸದ್ಯದ ಪ್ರಸಂಗದಲ್ಲಿ ಇಂಥ ಮಹಾಸಭೆ ಎಷ್ಟೊಂದು ಮಹತ್ವದ್ದಾಗಿದೆಂಬುದನ್ನು ಬೇರೆ ಹೇಳಬೇಕಿಲ್ಲ. ಇಡೀ ಕನ್ನಡನಾಡಿನ ಜನತೆಯ ನಿಜವಾದ ಹಿತ ಮತ್ತು ಅಭಿವೃದ್ಧಿಯಾಗಬೇಕಾದರೆ ಸಂಸ್ಥಾನವನ್ನೊಳಗೊಂಡ ಇಡೀ ಕರ್ನಾಟಕವು ಒಂದೇ ಆಡಳಿತಕ್ಕೆ ಒಳಗಾಗುವುದು ಅತ್ಯವಶ್ಯವೆಂಬುದು ಸ್ಪಷ್ಟವಾಗಿದೆ. ಈ ಮಹತ್ವದ ವಿಷಯವನ್ನು ವಿಚಾರಮಾಡಿ ಗೊತ್ತುವಳಿಯನ್ನು ಸ್ವೀಕರಿಸುವುದಕ್ಕಾಗಿಯೆ ಈ ಅಧಿವೇಶನ ಕೂಡುತಿದೆ. ಬೇಗನೆ ಕೂಡಲಿರುವ ಘಟನಾ ಸಮಿತಿಯಲ್ಲಿ ಭಾಷಾನ್ವಯ ಪ್ರಾಂತ ರಚನೆಯ ಪ್ರಶ್ನೆಯನ್ನು ಕೈಕೊಳ್ಳಬೇಕೆಂದು ಒತ್ತಾಯ ಪಡಿಸುವ ಅವಶ್ಯಕತೆಯೂ ಇದೆ. ಈ ಬಗ್ಗೆಯೂ ಈ ಮಹಾಧಿವೇಶನದಲ್ಲಿ ವಿಚಾರವಾಗಿ ಗೊತ್ತುವಳಿ ಸ್ವೀಕರಿಸಬೇಕಾಗಿದೆ. ಈ ಗೊತ್ತುವಳಿಗಳನ್ನು ಜಾರಿಯಲ್ಲಿ ತರಲು ಉಪಸಮಿತಿಗಳನ್ನು ಏರ್ಪಡಿಸುವದು ಅವಶ್ಯವಾಗಿದೆ ಇಂಥ ಮಹತ್ವದ ವಿಷಯಗಳನ್ನು ವಿಚಾರಿಸುವುದಕ್ಕಾಗಿ ಇಡೀ ಕರ್ನಾಟಕದ ಮಹಾಸಭೆ ಈಗ ಕೂಡುತಿರುವುದು ಅಭಿನಂದನೀಯ ಸಂಗತಿಯಾಗಿದೆ. ಯಾವುದೊಂದು ಸಮ್ಮೇಲನದಂತೆ ಎಲ್ಲರಿಗೂ ಈ ಮಹಾಸಭೆಗೆ ಆಮಂತ್ರಣ ಕೊಡದೆ ಕರ್ನಾಟಕದ ಪ್ರಾತಿನಿಧಿಕ ಸಂಸ್ಥೆಗಳ ಸದಸ್ಯರಿಗೆ, ನಾಡಿನ ಪ್ರಮುಖರಿಗೆ ಮಾತ್ರ ಆಮಂತ್ರಣ ಕೊಟ್ಟದ್ದು ಸ್ತುತ್ಯವಾಗಿದೆ. ಪ್ರೇಕ್ಷಕರೆಂದು ಇತರ ಕಾರ್ಯಕರ್ತರೂ ಅಧಿವೇಶನಕ್ಕೆ ಬರಬಹುದು. ಆಮಂತ್ರಿತರು ಮತ್ತು ಇತರರು ಈ ಅಧಿವೇಶನಕ್ಕೆ ಹೋಗಿ ಅದನ್ನು ಯಶಸ್ವಿಗೊಳಿಸುವುದಲ್ಲದೆ ಭಾವೀ ಅಖಂಡ ಕರ್ನಾಟಕ ಪ್ರಾಂತರಚನೆಯ ಅಡಿಗಲ್ಲನ್ನು ದಾವಣಗೆರೆಯಲ್ಲಿ ಹಾಕಬೇಕೆಂದು ಕೇಳಿಕೊಳ್ಳುತ್ತೇವೆ.

## ಕಾಂಗ್ರೆಸ್ ಮತ್ತು ಕೂಲಿಕಾರರು

ಕೂಲಿಕಾರರ ಸಂಬಂಧದಲ್ಲಿ ಕಾಂಗ್ರೆಸ್ ಕಾರ್ಯಸಮಿತಿಯವರು ಮೊನ್ನಿನ ತಮ್ಮ ಸಭೆಯಲ್ಲಿ ಗೊತ್ತುವಳಿಯೊಂದನ್ನು ಸ್ವೀಕರಿಸಿ ಕೂಲಿಕಾರರಿಗೆ ನಿಚ್ಚಳ ಮಾರ್ಗವನ್ನು ತೋರಿಸಿಕೊಟ್ಟದ್ದಾರೆ. ಕಾಂಗ್ರೆಸ್ಸು ಮಹಾತ್ಮಾ ಗಾಂಧಿಯವರ ನೇತೃತ್ವದಲ್ಲಿ ವಿಧಾಯಕ ಕಾರ್ಯಕ್ರಮವನ್ನು ಕೈಕೊಂಡಂದಿನಿಂದ ದೇಶದಲ್ಲಿಯ ಎಲ್ಲ ವರ್ಗದವರ ಹಿತಸಂಬಂಧಗಳನ್ನೂ ನೋಡಿಕೊಳ್ಳುತಿದೆ. ಕಾಂಗ್ರೆಸ್ಸು ತನ್ನ ಕಾರ್ಯಕ್ಷೇತ್ರವನ್ನು ಆ ದಿಸೆಯಲ್ಲಿ ವ್ಯಾಪಕಗೊಳಿಸಿಕೊಂಡಿದೆ. ಆದರೆ ಯಾವುದೊಂದು ಕಾರ್ಯವನ್ನು ಮಾಡಬೇಕಾದರೆ ವರ್ಗ ಕಲಹವೇಳದಂತೆ ಜಾಗ್ರತಿಯನ್ನು ಕಾಂಗ್ರೆಸ್ಸು ವಹಿಸುತಿದೆ. ಅಂತೆಯೆ ಹಲವರು ಕಾಂಗ್ರೆಸ್ಸು ಕೂಲಿಕಾರ ಮತ್ತು ಒಕ್ಕಲಿಗರ ಹಿತಸಂಬಂಧಗಳನ್ನು ನೋಡುವಲ್ಲಿ ಮಂದಗಾಮಿಯಾಗಿದೆಂದು ಆರೋಪಿಸುವುದುಂಟು. ಪರಿಸ್ಥಿತಿಯನ್ನು ನಿಷ್ಪಕ್ಷಪಾತವಾಗಿ ವಿಚಾರ ಮಾಡಿದರೆ ಕಾಂಗ್ರೆಸ್ಸಿನ ಧೋರಣೆಯೆ ಸಮಂಜಸವಾಗಿದೆಂಬದು ಗೊತ್ತಾಗುವದು. ದೇಶದಲ್ಲಿ ಶಾಂತಿ ಪರಸ್ಪರ ಬಾಂಧವ್ಯ ವೈಕ್ರಿಯು ಳಿಯಬೇಕಾದರೆ ವರ್ಗಕಲಹವೇಳದಂತೆ ನೋಡಿಕೊಳ್ಳುವದವಶ್ಯವಾಗಿದೆ. ಕಾಂಗ್ರೆಸ್ ಕಾರ್ಯಸಮಿತಿಯು ಮೊನ್ನಿನ ಸಭೆಯಲ್ಲಿ ಕೂಲಿಕಾರರ ಸದ್ಯದ ಅಸಂತೋಷದ ಮತ್ತು ಸಂಪುಗಳ ಕಾರಣಗಳನ್ನು ಉಲ್ಲೇಖಿಸಿ ಅವುಗಳನ್ನು ನಿವಾರಿಸುವ ಉಪಾಯಗಳನ್ನು ಸೂಚಿಸಿದೆ. ರಾಷ್ಟ್ರದಲ್ಲಿಯ ಆರ್ಥಿಕ ವೈಷಮ್ಯ ಮತ್ತು ಪರಕೀಯ ಪ್ರಭುತ್ವದ ಹಣಕಾಸಿನ ವಿನಿಮಯದ ಕೃತ್ರಿಮ ವ್ಯವಸ್ಥೆಯೆ ಸದ್ಯದ ಅಶಾಂತಿಗೆ ಕಾರಣ. ಇದನ್ನು ಮರೆತು ಕೇವಲ ಉದ್ಯೋಗ ವ್ಯವಸಾಯಗಳ ಒಡೆಯರನ್ನು ದೂರುವದು ಸಮಂಜಸವಾಗಲಾರದು. ಆದರೆ ಕೆಲವು ಪಕ್ಷಗಳ ಹೊಣೆಗೇಡಿ ಮುಂದಾಳುಗಳು ಬರಿ ಸಂಪುಗಳ ಹಾವಳಿಯನ್ನೇ ಎಬ್ಬಿಸಿ ದೇಶದಲ್ಲಿ ಅಶಾಂತಿಯನ್ನು ಹಬ್ಬಿಸಲು



## ಸಂಪಾದಕೀಯ * * * * * * * *

# ಟೀಕೆ-ಟಿಪ್ಪಣೆಗಳು

ಪ್ರಯತ್ನಿಸುತಿರುವದು ನಿಜವಾಗಿಯೂ ಶೋಚನೀಯವಾಗಿದೆ. ಮೇಲೆ ಹೇಳಿದಂತೆ ಕಾಂಗ್ರೆಸ್ಸು ದೇಶದಲ್ಲಿಯ ದೀನ ದರಿದ್ರರ, ರೈತರ ಕೂಲಿಕಾರರ ಕೈವಾರಿಯಾದ್ದರಿಂದ ಕೂಲಿಕಾರರ ನ್ಯಾಯ್ಯ ಆಕಾಂಕ್ಷೆಗಳನ್ನು ಪೂರಯಿಸಿ ಅಶಾಂತಿಯ ನಿಜ ಕಾರಣಗಳನ್ನು ನಿವಾರಿಸಬೇಕೆಂದು ಆಯಾ ಉದ್ಯೋಗ ವ್ಯವಸಾಯಗಳ ಒಡೆಯರಿಗೆ ಮತ್ತು ಸರಕಾರಕ್ಕೆ ವಿನಂತಿಸಿಕೊಂಡಿದೆ. ಕೂಲಿಕಾರರ ಬೇಡಿಕೆಗಳನ್ನು ತ್ರಯಸ್ಥರ ಸಮಿತಿಗೆ ಒಪ್ಪಿಸಿ ಅವುಗಳನ್ನು ತೀವ್ರ ಬಗೆಹರಿಸುವ ಏರ್ಪಾಟ ಮಾಡಬೇಕೆಂದೂ ಕೇಳಿಕೊಂಡಿದೆ. ಕೂಲಿಕಾರರಿಗೆ ಕಾರ್ಯಸಮಿತಿಯು ಈ ಸಂದರ್ಭದಲ್ಲಿ ಸಲಹೆ ಕೊಟ್ಟದ್ದು ಉಚಿತವಾಗಿದೆ. ಸಂಪಿನ ಸಂದರ್ಭಗಳನ್ನು ಆದಷ್ಟು ತಪ್ಪಿಸಬೇಕೆಂಬುದೇ ಆ ಸೂಚನೆ. ಮತಭೇದದ ಪ್ರಶ್ನೆಗಳನ್ನೂ ಮಧ್ಯಸ್ಥರಿಗೊಪ್ಪಿಸಿ ಅವರ ನಿರ್ಣಯದಂತೆ ನಡೆಯಬೇಕು. ಕಾಂಗ್ರೆಸ್ ಕಾರ್ಯ ಸಮಿತಿಯು ಈ ಗೊತ್ತುವಳಿಯಂತೆ ಎಲ್ಲರೂ ನಡೆದುಕೊಂಡು ದೇಶದಲ್ಲಿಯ ಅಸಂತೋಷವನ್ನು ಹೋಗಲಾಡಿಸಬೇಕೆಂದು ಬಿನ್ನವಿಸುತ್ತೇವೆ.

## ದಲಿತರ ಧೋರಣ

ದಲಿತ ವರ್ಗದ ಧುರೀಣರಾದ ಡಾ. ಅಂಬೇಡಕರರ ಪ್ರಚೋದನೆಯಿಂದ ಅಲ್ಲಲ್ಲಿ ಆ ವರ್ಗದವರು ನಿರೋಧನವನ್ನು ನಡೆಸಿರುವದು ಸರ್ವಶ್ರುತ. ಮಂತ್ರಿ ರಾಯಭಾರದವರು ತಮ್ಮ ವರ್ಗಕ್ಕೆ ಮಾಡಿರುವ ಅನ್ಯಾಯವನ್ನು ಪ್ರತಿಭಟಿಸುವದಕ್ಕಾಗಿ ತಾವು ಈ ನಿರೋಧನವನ್ನು ನಡೆಸಿದ್ದಾಗಿ ಅವರು ಹೇಳುತಿರುವರು. ಮಂತ್ರಿತ್ರಯರ ಧೋರಣೆ ಪ್ರತಿಭಟಿಸಲು ಪ್ರಾಂತಿಕ ಶಾಸನಸಭೆಗಳ ಮುಂದೆ ನಿರೋಧನವೇಕೊ ತಿಳಿಯದಾಗಿದೆ. ಈ ಬಗೆಯ ಅಸಮಂಜಸ ನಿರೋಧನಗಳಲ್ಲಿ ಏನಾದರೂ ಗಲಭೆ ಮುಂತಾದ್ದು ಸಂಭವಿಸಿದರೆ ಅದಕ್ಕೆ ಹೊಣೆಗಾರರಾರೆಂಬುದನ್ನು ಈ ಧುರೀಣರು ವಿಚಾರಿಸಿರುವರೋ? ಈ ನಿರೋಧನದಲ್ಲಿ ಭಾಗ ವಹಿಸಿದ ಜನರಾದರೂ ಎಂಥವರೆನ್ನಬೇಕು? ೩-೪ ವಾರ ಶಿಕ್ಷೆಗೊಳಗಾಗಿದ್ದರೂ ಅದನ್ನನುಭವಿಸಲಾರದೆ ಬಹುಸಂಖ್ಯಾಕರು ಕ್ಷಮೆ ಬೇಡಿಕೊಳ್ಳುತಿರುವರು. ಇಂಥವರನ್ನು ಸತ್ಯಾಗ್ರಹಿಗಳೆಂದು ಎಂತು ಕರೆಯಬೇಕು? ಅಂತೆಯೆ ದೇಶದಲ್ಲಿಯ ಸಮಂಜಸ ಜನರೆಲ್ಲ ಇದನ್ನು ನಿಷೇಧಿಸಿರುವರು. ಈ ದಲಿತ ವರ್ಗದವರ ಧೋರಣದ ಪ್ರತೀಕಾರಾರ್ಥವಾಗಿ ತಾವೂ ಸತ್ಯಾಗ್ರಹ ಹೂಡಬಹುದೊ ಎಂದು ಹರಿಜನ ಸಂಘದವರು ಕೇಳಿದ್ದಕ್ಕೆ ಸರದಾರ ವಲ್ಲಭಭಾಯಿ ಪಟೇಲರು ಬೇಡೆಂದು ಹೇಳಿರುವರು. ದಲಿತ ವರ್ಗದವರು ಹೂಡಿದ್ದು ಸತ್ಯಾಗ್ರಹವೇ ಅನದ್ದರಿಂದ ಅದನ್ನು ಪ್ರತೀಕರಿಸುವದೇ ಬೇಡೆಂದು ಅವರು ಹೇಳಿದ್ದಾರೆ. ದಲಿತ ವರ್ಗದವರ ಉದ್ಧಾರಕ್ಕಾಗಿ ಕಾಂಗ್ರೆಸು ಹೆಣಗುತಿರುವಷ್ಟು ಬೇರೆ ಯಾವ ಸಂಸ್ಥೆಯೂ ಹೆಣಗುವುದಿಲ್ಲೆಂಬುದು ಸರ್ವಶ್ರುತ. ಇಂದು ಹರಿಜನರಿಗೆ ಸಿಕ್ಕುತಿರುವ ಸ್ಥಾನಮಾನಗಳಿಗೆ ಕಾಂಗ್ರೆಸ್ಸೆ ಕಾರಣವೆಂಬುದನ್ನು ಹರಿಜನರೂ ಅಲ್ಲಗಳೆಯರು. ಇದನ್ನು ನೆನೆದು ದಲಿತ ವರ್ಗದವರು ತಮ್ಮ ಧೋರಣವನ್ನು ಬದಲಿಸಿಕೊಂಡಷ್ಟು ಅವರಿಗೂ ಹಿತಕರ ದೇಶಕ್ಕೂ ಹಿತಕರ.

## ಬರೀ ಮಾತು ಬೇಡ ಕೃತಿ ಬೇಕು

ಹೊಸವಾಗಿ ಮೈಸೂರು ದಿವಾಣರಾಗಿ ನೇಮಿಸಲ್ಪಟ್ಟ ಸರ್ ರಾಮಸ್ವಾಮಿ ಮುದ್ಲಿಯಾರರು ಮೈಸೂರು ನಗರಭವನದಲ್ಲಿ ಮೈಸೂರು ನಾಗರಿಕರಿತ್ತ ಸ್ವಾಗತಕ್ಕೆ ಉತ್ತರ ಕೊಡುತ್ತ ಮೈಸೂರಿನ ಏಳಿಗೆಯೇ ತಮ್ಮ ಗುರಿಯೆಂದು ಹೇಳಿದ್ದಾರೆ. ಸದ್ಯದ ಸೂಕ್ಷ್ಮ ಪ್ರಸಂಗದಲ್ಲಿ ಮಹಾರಾಜರಿಗೂ ಮೈಸೂರು ಪ್ರಜರಿಗೂ ಕೈಲಾದಷ್ಟು ಅತ್ಯುತ್ತಮ ಸೇವೆ ಸಲ್ಲಿಸಬೇಕೆಂದೇ ಈ ಅಧಿಕಾರವನ್ನು ವಹಿಸಿಕೊಂಡದ್ದೆಂದು ಅವರು ನುಡಿದರು. ಆರ್ಥಿಕ ಸಾಂಸ್ಕೃತಿಕ ಮುಂತಾದ ಕ್ಷೇತ್ರದಲ್ಲಿ ಮೈಸೂರಿನ ಏಳಿಗೆಯನ್ನು ಸಾಧಿಸಿ ಅದನ್ನು ಅಭಿವೃದ್ಧಿಗೆ ತರಲು ಪ್ರಯತ್ನಿಸುವುದಾಗಿಯೂ ಅವರು ಹೇಳಿದರು. ನಾಗರಿಕತದಷ್ಟೇ ಅಲ್ಲದೆ ಹಳ್ಳಿಗರ ಹಿತವನ್ನೂ ಸಾಧಿಸಬೇಕೆಂದಿದ್ದೇನೆ ಎಂದು ಮುಂತಾಗಿ ಹೇಳಿರುವರು. ಸರ್ ರಾಮಸ್ವಾಮಿಯವರ ಈವರೆಗಿನ ಧೋರಣವು ಅತ್ಯಂತ ಪ್ರತಿಗಾಮಿಯೂ ಸರಕಾರದಹೌದಪ್ಪಗಳು ಅನುಸರಿಸತಕ್ಕಂತಹದ್ದೂ ಇರುವುದೆಂಬುದು ಬ್ರಿಟಿಶ ಭಾರತೀಯರಿಗೆ ಅನುಭವದ ಸಂಗತಿಯಾಗಿದೆ. ಅಂತೆಯೆ ಅವರು ದಿವಾಣರಾಗಿ ನೇಮಕ ಹೊಂದಿದ್ದನ್ನು ಹಲವರನ್ನು ಬಿಟ್ಟು ಉಳಿದವರಾರೂ ಸ್ವಾಗತಿಸಲಿಲ್ಲ. ಈ ಪರಿಸ್ಥಿತಿಯಲ್ಲಿ ಸರ್ ರಾಮಸ್ವಾಮಿಯವರು ಪ್ರಾಂತದ ಏಳಿಗೆಗಾಗಿ ಪ್ರಯತ್ನಿಸುವ ಆಶ್ವಾಸನ ಕೊಟ್ಟದ್ದು ಅಭಿನಂದನೀಯವಾಗಿದೆ. ಆದರೆ ಬರಿ ಮಾತಿನಿಂದ ಯಾವ ಉದ್ದಿಷ್ಟವೂ ಸಾಧಿಸದು. ಸರ್ ರಾಮಸ್ವಾಮಿಯವರು ತಮ್ಮ ಕೃತಿಯನ್ನು ಅದರಂತೆ ಮಾರ್ಪಡಿಸಿಕೊಳ್ಳಬೇಕು. ಇಂದು ಮೈಸೂರು ಪ್ರಜೆಗಳು ಹೊಣೆಗಾರ ಪ್ರಜಾಪ್ರಭುತ್ವಕ್ಕಾಗಿ ನಾಗರಿಕ ಮೂಲಭೂತ ಹಕ್ಕುಗಳಿಗಾಗಿ ಹಾತೊರೆಯುತ್ತಿದ್ದಾರೆ. ಸಂಸ್ಥಾನದಲ್ಲಿ ವಿವಿಧ ಕೈಗಾರಿಕೆಗಳ ಅಭಿವೃದ್ಧಿಯಾಗಿದ್ದರೂ ಜನತೆಯ ವಿಶೇಷತಃ ಸಾಮಾನ್ಯ ಜನತೆಯ ಸಂಕಷ್ಟಗಳು ಕಡಿಮೆಯಾಗಿಲ್ಲ. ಬಡತನದಿಂದ, ಬಗೆ ಬಗೆಯ ಕೊರತೆಗಳಿಂದ ಅವರು ಬಳಲುತಿರುವರು. ಇದೆಲ್ಲ ಮಾಯವಾಗಲಿಕ್ಕೆ ಬೇಕು. ವಿಶ್ವಕರ್ನಾಟಕದಂಥ ಪತ್ರಿಕೆಯ ಮೇಲೆ ಗದಾ ಪ್ರಹಾರ ಮಾಡಿ ಪತ್ರಿಕಾ ಸ್ವಾತಂತ್ರ್ಯವನ್ನು ಮೈಸೂರು ಸರಕಾರ ಕಸಿದುಕೊಂಡಿದೆ. ಮೈಸೂರಿನ ಸಾರ್ವತ್ರಿಕ ಅಭಿವೃದ್ಧಿಗಾಗಿ ಪ್ರಯತ್ನಿಸುವ ಸರ್ ರಾಮಸ್ವಾಮಿಯವರು ಕೂಡಲೆ ಈ ನಿರ್ಬಂಧವನ್ನು ತೆಗೆದುಹಾಕಬೇಕು. ಸರ್ ರಾಮಸ್ವಾಮಿಯವರು ಪ್ರಜಾಹಿತ ಧೋರಣದ ಕೃತಿಗಳನ್ನು ಕೈಕೊಂಡು ನುಡಿದಂತೆ ನಡೆದ ಗೌರವಕ್ಕೆ ಪಾತ್ರರಾಗಬೇಕಾಗಿ ಸೂಚನೆ.

## ಕಲಕತ್ತೆಯಲ್ಲಿ ಹತ್ಯಾಕಾಂಡ

ಲೀಗ ಹೋರಾಟದ ದಿನದ ಪರಿಣಾಮವಾಗಿ ಕಳೆದ ೧೬ ನೇ ತಾರೀಕಿನಿಂದ ಕಲಕತ್ತೆಯಲ್ಲಿ ಹತ್ಯಾಕಾಂಡ ನಡೆದಿದೆ. ಇದರ ವಿವರಗಳನ್ನು ಇದೇ ಸಂಚಿಕೆಯಲ್ಲಿ ಬೇರೆ ಕಡೆಗೆ ಕೊಟ್ಟಿದ್ದೇವೆ. ಇಷ್ಟೊಂದು ಭೀಷಣ ಹತ್ಯಾಕಾಂಡ ನಡೆಯಲು ಅಲ್ಲಿನ ಮಂತ್ರಿಮಂಡಳದ ಮತ್ತು ಗವರ್ನರರ ಅಲಕ್ಷವೇ ಕಾರಣವೆಂದು ಹೊಣೆಗಾರ ಮುಖಂಡರೆಲ್ಲ ಅಭಿಪ್ರಾಯಪಡುತಿರುವರು. ಲೀಗ ಹೋರಾಟ ದಿನ ಸಾರ್ವಜನಿಕ ಬಿಡುವು ಕೊಟ್ಟದ್ದರಿಂದ ತಮಗೆ ಸರಕಾರದ ಬೆಂಬಲವಿದೆಂದು ಪುಂಡರು ಭಾವಿಸಿ ಮಿತಿಮೀರಿ ಗೊಂದಲ ನಡೆಸಿದ್ದಾರೆ. ಹೋರಾಟ ದಿನವೆಂದು ಆಚರಿಸುವಾಗ ಸರಕಾರ ಬಿಡುವನ್ನು ಏಕೆ ಸಾರಬೇಕೋ ತಿಳಿಯದಾಗಿದೆ. ಗಲಭೆ ಪ್ರಾರಂಭವಾದ ಕೂಡಲೆ ಸರಕಾರದವರು ಉಗ್ರೋಪಾಯಗಳನ್ನು ಕೈಕೊಂಡಿದ್ದರೆ ಇಷ್ಟೊಂದು ಜನ ಧನ ಸಾಮಗ್ರಿಗಳ ಹಾನಿಯಾಗುತಿರಲಿಲ್ಲೆಂದು ಪರಿಸ್ಥಿತಿಯನ್ನು ಚನ್ನಾಗಿ ಬಲ್ಲವರು ಅಭಿಪ್ರಾಯ ಪಟ್ಟಿದ್ದಾರೆ. ೧೬ ನೇ ತಾರೀಕಿನ ಹರತಾಳದಲ್ಲಿ ಒತ್ತಾಯಮಾಡುವುದಿಲ್ಲೆಂದು ಸರಕಾರವು ಸಾರಿದ್ದರೂ ಅದರಂತೆ ನಡೆದುಕೊಳ್ಳಲಿಲ್ಲೆಂದು ವರದಿ ಪ್ರಸಿದ್ಧವಾಗಿದೆ. ಅಂದು ಮುಂಜಾನೆ ತೆರೆದಿದ್ದ ಅಂಗಡಿಗಳನ್ನು ಮುತ್ತಿ ಪುಂಡರು ಒತ್ತಾಯದಿಂದ ಮುಚ್ಚಿಸುತಿದ್ದರೂ ಸರಕಾರೀ ಅಧಿಕಾರಿಗಳು ಅವರನ್ನು ತಡೆಯಲಿಲ್ಲ. ಸಂಜೆ ಸಭೆಯ ನಂತರ ಹಿಂತಿರುಗಿದ ಪುಂಡರು ಭಯಂಕರ ರೀತಿಯಲ್ಲಿ ಕೊಲೆ ಸುಲಿಗೆಗಳನ್ನು ನಡೆಸಿದರೂ ಸರಕಾರದವರು ೧೪೪ ನೇ ಕಲಮು ಜಾರಿ ಮಾಡಲಿಲ್ಲ. ಸೈನಿಕರನ್ನೂ ಕರೆಸಲಿಲ್ಲ ಎಂದು ಮುಂತಾಗಿ ಮೌಲಾನಾ ಅಬುಲ್‌ಕಲಂ‌ಆಜಾದರು ಪ್ರಸಿದ್ಧಿಸಿದ್ದಾರೆ. ಇಷ್ಟೊಂದು ಹತ್ಯಾಕಾಂಡ ನಡೆದ ಬಳಿಕ ಸುಹ್ರವರ್ದಿ ಸಾಹೇಬರಿಗೆ ಎಚ್ಚರ ಹುಟ್ಟಿದಂತೆ ತೋರುತ್ತದೆ. ಇತ್ತೀಚೆ ಹೊರಡಿಸಿದ ಪ್ರಕಟಣೆಯಲ್ಲಿ ಅವರು ಈ ಪುಂಡಾಟಿಕೆಯನ್ನು ಕಡುತರ ಟೀಕಿಸಿ ದೊಂಬಿಯನ್ನು ಹತ್ತಿಕ್ಕಲು ಉಗ್ರ ಉಪಾಯ ಕೈಕೊಳ್ಳುವುದೆಂದೂ ಶಾಂತತೆಯನ್ನು ಎಲ್ಲೆಲ್ಲಿಯೂ ಸ್ಥಾಪಿಸಲು ಶಾಂತತಾ ಸಮಿತಿಗಳನ್ನು ಸ್ಥಾಪಿಸಲಾಗುವದೆಂದೂ ಹೇಳಿ ಎಲ್ಲರ ಸಹಕಾರವನ್ನು ಕೋರಿದ್ದಾರೆ ಅವರು ಇಂಥ ಧೋರಣವನ್ನು ಪ್ರಾರಂಭದಲ್ಲಿಯೇ ಸ್ವೀಕರಿಸಿದ್ದರೆ ಇಷ್ಟೊಂದು ಅನರ್ಥವೇ ಸಂಭವಿಸುತಿರಲಿಲ್ಲ. ಅಂತೆಯೆ ಈ ಅನರ್ಥದ ಹೊಣೆಯನ್ನೆಲ್ಲ ಸರಕಾರದ ಮೇಲೆಯೆ ಹಾಕುತಿರುವುದು. ಸರಕಾರದವರು ಇನ್ನಾದರೂ ಬುದ್ಧಿಗಲಿತು ಈ ಗಲಭೆಯ ವಿಚಾರಕ್ಕಾಗಿ ನಿಷ್ಪಕ್ಷಪಾತ ವಿಚಾರಣಾ ಮಂಡಳವನ್ನು ನಿಯಮಿಸಬೇಕು. ಅಪರಾಧಿಗಳನ್ನು ಶಿಕ್ಷಿಸಬೇಕು. ಆದರೆ ದೊಂಬಿಯನ್ನೇ ಹತ್ತಿಕ್ಕಲು ಅಸಮರ್ಥವಾದ ಸರಕಾರವು ಅದೆಂತು ವಿಚಾರಣಾ ಮಂಡಳ ನಿಯಮಿಸಬಲ್ಲುದು?



## ಬೇಗೆ ಹಬ್ಬುಹತ್ತಿದೆ!

ಕಲಕತ್ತೆಯಲ್ಲಿ ಪ್ರಾರಂಭವಾದ ಈ ಹತ್ಯಾಕಾಂಡವು ಪ್ರಾಂತದ ಬೇರೆ ಬೇರೆ ನಗರಗಳಿಗೂ ಹೆಚ್ಚುತಿರುವುದು ದುರ್ದೈವದ ಸಂಗತಿಯಾಗಿದೆ. ಇತ್ತೀಚೆಗೆ ಬಂದ ಸುದ್ದಿಗಳನ್ನು ನೋಡಿದರೆ ಢಾಕಾ ರಾಣೀಗಂಜ,ಬಂದಾರ ಮೊದಲಾದ ಕಡೆಗೆ ದೊಂಬಿಯಾಗಿ ಹಲವರು ಸತ್ತಿರುವರಲ್ಲದೆ ಅನೇಕರಿಗೆ ಗಾಯಗಳಾದ ಸುದ್ದಿಯಿದೆ. ಇದನ್ನು ನೋಡಿದರೆ ಮೇಲೆ ಹೇಳಿದಂತೆ ಸರಕಾರದ ಅಸಮರ್ಥತೆ ವ್ಯಕ್ತವಾಗುತ್ತದೆ. ಅಲ್ಲದೆ ಸುಹ್ರವರ್ದಿಯವರು, ಕಾಂಗ್ರೆಸ್ಸು ನಡುಗಾಲ ಸರಕಾರ ಸ್ಥಾಪಿಸಲು ಮುಂದಾದ ಬಗ್ಗೆ ತಮ್ಮ ಅಭಿಪ್ರಾಯ ವ್ಯಕ್ತಪಡಿಸುತ್ತ ಕೇಂದ್ರದಲ್ಲಿ ಕಾಂಗ್ರೆಸ್ ಮಂತ್ರಿಮಂಡಳ ಸ್ಥಾಪಿತವಾದರೆ ಬಂಗಾಲ ಸಿಡಿದು ನಿಂತು ಸ್ವಾಯತ್ತ ಪ್ರಾಂತವಾಗುವದೆಂದು ಮುಂತಾಗಿ ಒಳ್ಳೆ ಉದ್ವೇಗಜನಕ ಭಾಷಣ ಮಾಡಿದುದೂ ಈ ಅನರ್ಥಕ್ಕೆ ಕಾರಣವೆಂದು ಹೇಳಬೇಕಾಗುವದು. ಮುಸ್ಲಿಂ ಲೀಗ ಮುಖಂಡರು ತಮ್ಮ ಭಾಷಣಗಳ ಧಾಟಿಯನ್ನು ಇನ್ನೂ ಬದಲಿಸದಿರುವುದು ಶೋಚನೀಯ ಸಂಗತಿಯಾಗಿದೆ. ಬಂಗಾಲದ ಕೂಲಿಕಾರ ಗವರ್ನರರಾದರೂ ಈ ಸಂದರ್ಭದಲ್ಲಿ ತಮ್ಮ ಹೊಣೆಯನ್ನು ನಿರ್ವಹಿಸಲಿಲ್ಲೆಂದು ಸ್ಪಷ್ಟವಾಗಿ ಹೇಳಬೇಕಾಗಿದೆ. ಟ್ರೇಡ ಯೂನಿಯನ್ ಕಾಂಗ್ರೆಸ್ಸಿನ ಮೃಣಾಲಿಕಾಂತ ಬೋಸರು ಪ್ರಕಟನೆಯೊಂದನ್ನು ಹೊರಡಿಸಿ ಗವರ್ನರರ ಮತ್ತು ಮಂತ್ರಿಮಂಡಳದ ಧೋರಣವನ್ನು ಉಗ್ರವಾಗಿ ಖಂಡಿಸಿದ್ದಾರೆ. ಸದ್ಯದ ಮಂತ್ರಿಮಂಡಳವನ್ನು ಕಿತ್ತುಹಾಕಿ ಗವರ್ನರ ಸಾಹೇಬರು ತಮ್ಮ ಕಡೆಗಾದರೂ ಅಧಿಕಾರ ತೆಗೆದುಕೊಳ್ಳಬೇಕು. ಇಲ್ಲವೆ ಪ್ರಜರ ವಿಶ್ವಾಸಕ್ಕೆ ಪಾತ್ರವಾದ ಮತ್ತು ಶಾಂತಿಯನ್ನು ಪ್ರಸ್ಥಾಪಿಸಬಲ್ಲ ಸಮರ್ಥ ಮಂತ್ರಿಮಂಡಳವನ್ನು ಸ್ಥಾಪಿಸಬೇಕು. ಹೀಗೇನಾದರೂ ಮಾಡದಿದ್ದರೆ ಪ್ರಾಂತದಲ್ಲಿಯ ಅಶಾಂತತೆ ಬೇಗ ನೊಂದಲಾರದೆಂಬುದು ನಿರ್ವಿವಾದವಾಗಿದೆ.

## ಇಂಡೋನೇಶಿಯ ಸ್ವಾತಂತ್ರ್ಯೋತ್ಸವ

ಇದೇ ೧೭ ನೇ ತಾರೀಕು ಇಂಡೋನೇಶಿಯ ರಾಷ್ಟ್ರವು ಪ್ರಥಮ ಸ್ವಾತಂತ್ರ್ಯೋತ್ಸವವನ್ನು ಜರುಗಿಸಿ ಗುಲಾಮಗಿರಿಯಲ್ಲಿ ತೊಳಲುತಿರುವ ರಾಷ್ಟ್ರಗಳಿಗೆಲ್ಲ ಮೇಲ್ಪಂಕ್ತಿ ಹಾಕಿಕೊಟ್ಟಿತು. ಕಳೆದ ವರ್ಷದ ವರೆಗೆ ಡಚ್ ಈಸ್ಟ ಇಂಡೀಜವೆಂಬ ಗುಲಾಮಗಿರಿಯ ದ್ಯೋತಕವಾದ ಹೆಸರಿನಿಂದ ಕರೆಯಿಸಿಕೊಳ್ಳುತಿದ್ದ ಇಂಡೋನೇಶಿಯವು ಒಳ್ಳೆ ಧೈರ್ಯದಿಂದ ಮುಂದಡಿಯಿಟ್ಟು ದೇಶಸ್ವಾತಂತ್ರ್ಯ

-ಉಳಿದ ಪುಟಕ್ಕೆ

# ದಿವಂಗತ ಎಚ್. ಜಿ. ವೆಲ್ಸರು

## ಪ್ರಸಿದ್ಧ ಬ್ರಿಟಿಶ ಲೇಖಕರು ಕಣ್ಮರೆಯಾದರು

### ಪರಮಾಣು ಬಾಂಬು, ವಿಮಾನಗಳನ್ನು ಮುಂಗಂಡ ಐತಿಹಾಸಿಕ ವಿಜ್ಞಾನಿ

ಆಧುನಿಕ ಕಾಲದ ಜಗತ್ಪ್ರಸಿದ್ಧ ಲೇಖಕರಲ್ಲೊಬ್ಬರಾದ ಎಚ್. ಜಿ. ವೆಲ್ಸರು ಮೊನ್ನೆ ತಾ. ೧೩ ನೇ ದಿನ ಸಂಜೆ ಲಂಡನ್ನಿನಲ್ಲಿ ತಮ್ಮ ಮನೆಯಲ್ಲಿ ೭೯ ನೆಯ ವಯಸ್ಸಿನಲ್ಲಿ ನಿಧನ ಹೊಂದಿದರು.

ಬರ್ನಾರ್ಡ್ ಶಾ ರೊಬ್ಬರನ್ನು ಬಿಟ್ಟರೆ ಆಧುನಿಕ ಯುವಕರ ಮನಸ್ಸಿನ ಮೇಲೆ ವೆಲ್ಸರಷ್ಟು ಪ್ರಚಂಡ ಪರಿಣಾಮವನ್ನು ಮಾಡಿದ ಬೇರೊಬ್ಬ ಬ್ರಿಟಿಶ ಲೇಖಕನಿಲ್ಲವೆಂದು ಹೇಳಬಹುದು. ಸ್ವತಃ ವೈಜ್ಞಾನಿಕರಾದ ಅವರು ತಮ್ಮ ಪುಸ್ತಕಗಳ ಮೂಲಕ ವಿಜ್ಞಾನವನ್ನು ಜನಸಾಮಾನ್ಯರಿಗೆ ರುಚಿಸುವಂತೆ ಕಥಾರೂಪಕ್ಕಿಳಿಸುವದರಲ್ಲಿ ಅತ್ಯಂತ ಸಮರ್ಥರಾಗಿದ್ದರು ವಿಜ್ಞಾನದ ಅಭ್ಯಾಸದೊಡನೆ ಇತಿಹಾಸವನ್ನೂ ಅವರು ಮೈಗೂಡಿಸಿಕೊಂಡಿದ್ದರು. ಪರಿಣಾಮವಾಗಿ ವಿಜ್ಞಾನದ ಸಂಶೋಧನೆಗಳು ಮಾನವಜೀವನದ ಮೇಲೆ ಮಾಡಬಹುದಾದ ಪ್ರಚಂಡ ಪರಿಣಾಮಗಳನ್ನು ಅವರು ಆಶ್ಚರ್ಯಕರವಾದ ತ್ರಿಕಾಲಜ್ಞತೆಯಿಂದ ಮುಂಗಾಣಲು ಸಮರ್ಥರಾಗಿದ್ದರು. ಪರಮಾಣು ವಿಚ್ಛೇದದ ಸಂಶೋಧನೆಯಾದ ೧ ಕೆಲವೇ ವರ್ಷಗಳಲ್ಲಿ, ಅಂದರೆ ಮೊದಲನೆ ಮಹಾಯುದ್ಧಕ್ಕೆ ಮೊದಲೇ ಪರಮಾಣು ಬಾಂಬುಗಳು ಯುದ್ಧದಲ್ಲಿ ಉಪಯೋಗಿಸಲ್ಪಡುವವೆಂಬ ಭವಿಷ್ಯವನ್ನು ಅವರು ಕೇವಲ ಕಲ್ಪನಾಶಕ್ತಿಯಿಂದ ನುಡಿದಿದ್ದರು. ಮುಂದಿನ ಶತಮಾನದ ಆದಿಯವರೆಗಿನ ಮಾನವ ಜಾತಿಯ ಇತಿಹಾಸವನ್ನು ಅವರ ಇನ್ನೊಂದು ಪುಸ್ತಕದಲ್ಲಿ ಕಾಣಬಹುದು. ಅವರು ಅದರಲ್ಲಿ ಎರಡನೆಯ ಮಹಾಯುದ್ಧವನ್ನೂ ಫ್ಯಾಸಿಝಂನ ಉದಯವನ್ನೂ ಹಿಟ್ಲರನಂಥ ವ್ಯಕ್ತಿಯೊಬ್ಬನ ಉತ್ಕರ್ಷವನ್ನೂ ಮುಂಗಂಡಿದ್ದರು. ಅವರ ಈ ಭವಿಷ್ಯಗಳಲ್ಲಿ ಮುಕ್ಕಾಲು ಮೂರ್ವೀಸ ಸತ್ಯವಾಗಿ ಪರಿಣಮಿಸಿವೆ.

The Invisible man (ಅದೃಶ್ಯವ್ಯಕ್ತಿ) ಎಂಬ ಅವರ ಕಥೆ ಚಲಚ್ಚಿತ್ರ ರೂಪದಲ್ಲಿ ಬಂದಾಗ ಅನೇಕರು ಅದನ್ನು ನೋಡಿ ಆಶ್ಚರ್ಯಪಟ್ಟಿರಬಹುದು. ಅವರ ಕಲ್ಪನೆಯ ಅದ್ಭುತರಮ್ಯ ನಿರ್ಮಾಣಗಳನ್ನು The End of the Earth (ಭೂಮಿಯ ಅವಸಾನ), Things to come (ಬರಲಿರುವ ಕಾಲ), Tales of Time and Space (ದೇಶ-ಕಾಲಗಳ ಕಥೆಗಳು) ಮೊದಲಾದ ಪುಸ್ತಕಗಳಲ್ಲಿ ಕಾಣಬಹುದು.

ಆಧುನಿಕ ಇಂಗ್ಲೀಷ ಸಮಾಜದ ಚಿತ್ರವನ್ನು ತೋರಿಸುವ ಹಲವಾರು ಕಾದಂಬರಿಗಳನ್ನು ಹೊಚ್ಚ ಹೊಸ ರೀತಿಯಲ್ಲಿ ವೆಲ್ಸರು ಬರೆದಿದ್ದಾರೆ.

ಜಗತ್ತಿನ ಅನೇಕ ಭವಿಷ್ಯದ ಘಟನೆಗಳನ್ನು ಮುಂಗಂಡ ಋಷಿಯಂಥ ಶ್ರೀ ವೆಲ್ಸರು ಮಾನವಕಲ್ಯಾಣದ ಆರಾಧಕರಾಗಿದ್ದರು. The Work, Wealth and Happiness of mankind (ಮಾನವ ಜಾತಿಯ ಕಾರ್ಯ, ಸೌಖ್ಯ, ಸಮೃದ್ಧಿಗಳು) ಎಂಬ ಪುಸ್ತಕದಲ್ಲಿ ಅವರ ಕಲ್ಯಾಣಕಾಂಕ್ಷೆ ಸ್ಪಷ್ಟವಾಗಿ ಒಡೆದು ಕಾಣುತಿತ್ತು. ಈ ಯುದ್ಧ ಆರಂಭವಾದಾಗ ಅವರು ಇದೇ ಧ್ಯೇಯದಿಂದ The Rights of Man (ಮಾನವನ ಹಕ್ಕುಗಳು) ಎಂಬ ವಾದಮಾಲೆಯನ್ನು ಪ್ರಾರಂಭಿಸಿ, ಮಾನವ ಹಕ್ಕುಗಳೇನಿರಬೇಕೆಂದು ವಿದ್ವಾಂಸರಲ್ಲಿ ವಿವಾದವನ್ನೆಬ್ಬಿಸಿದರು. ಅಗಲೆ ಗಾಂಧೀಜಿಗೂ ಅವರಿಗೂ ತಗಲಿಬಿದ್ದು ವೆಲ್ಸರು ಮಾನವನ ಹಕ್ಕುಗಳನ್ನು ಪ್ರಸ್ತಾಪಿಸಿದ್ದಾರೆ ಹೊರತು, ಅವನ ಕರ್ತವ್ಯಗಳನ್ನು ವಿಧಿಸಿಲ್ಲವೆಂದು ಗಾಂಧೀಜಿ ಟೀಕಿಸಿದ್ದು.

ವೆಲ್ಸರು ಸಾಮ್ಯವಾದಿಗಳಾಗಿದ್ದರು. ಆದರೆ ಯಾವದೇ ಬಗೆಯ ದಬ್ಬಾಳಿಕೆ, ಕಾರ್ಯ ಸ್ವಾತಂತ್ರ್ಯಹರಣಗಳನ್ನು ಅವರು ಸಹಿಸುತಿರಲಿಲ್ಲವಾದುದರಿಂದ ರಶಿಯನ್ ಸಾಮ್ಯವಾದಿ ಪ್ರಯೋಗ ಅವರ ಮನಸಿಗೆ ಬಂದಿರಲಿಲ್ಲ: ಸ್ಟಾಲಿನ್ನರನ್ನು ಅವರು ಭೆಟ್ಟಿಯಾದಾಗ ಈ ವಿಷಯ ಚರ್ಚಿಸಿದ್ದರ ವರದಿ ಪ್ರಕಟವಾಗಿದೆ. ಮಾನವ ಸ್ವಾತಂತ್ರ್ಯದ ಪ್ರತಿಪಾದಕರಾದುದರಿಂದಲೇ ಹಿಟ್ಲರನನ್ನು ಅವರು ದ್ವೇಷಿಸಿ ಅವನನ್ನು ಸೋಲಿಸಲು ಮಾನವ ಕುಲ ಒಂದಾಗಬೇಕೆಂದು ಸಾರಿದರು. ಹಿಟ್ಲರನಿಗೆ "ಯುರೋಪಿನ ಹುಚ್ಚ ನಾಯಿ" ಎಂದು ಹೆಸರಿಟ್ಟವರು ಇವರೆ. ಹಿಟ್ಲರನ ದಬ್ಬಾಳಿಕೆಯ ಮೇಲಿನ ದ್ವೇಷದಿಂದ ಇವರು ಯುದ್ಧಕಾಲದಲ್ಲಿ ಇಂಗ್ಲಂಡಿಗೆ ತೊಂದರೆ ಕೊಟ್ಟ ಹಿಂದುಸ್ತಾನದ ವಿಷಯಕ್ಕೆ ಕಟುವಾಕ್ಯಗಳನ್ನು ನುಡಿದುದೂ ಇದೆ.

ಎಲ್ಲ ಅಂಧ ರೂಢಿಗಳ ವೈರಿಯಾಗಿದ್ದ ವೆಲ್ಸರು ಮೊನ್ನೆ ಜುಲೈಯಲ್ಲಿ ಸಾಮ್ಯವಾದಿ Leader ಪತ್ರಿಕೆಯಲ್ಲಿ ಬ್ರಿಟಿಶ್ ಅರಸುಮನೆತನದ ಮೇಲೆ ಗದೆಯೆತ್ತಿ ಜನರನ್ನು ಬೆಚ್ಚಿಸಿಬಿಟ್ಟಿದ್ದರು. ಬ್ರಿಟಿಶ ಫ್ಯಾಸಿಸ್ಟ ಮುಂದಾಳಾದ ಸರ್ ಓಸ್ವಾಲ್ಡ ಮೋಸ್ಲೆಗೆ ಮುಸೋಲಿನಿ ಹಣವೊದಗಿಸುತಿದ್ದುದರಲ್ಲಿ ಬ್ರಿಟಿಶ ಅರಸುಮನೆತನದ ಕೈಯಿತ್ತೆಂಬ ಸಂಶಯ ವ್ಯಕ್ತಗೊಳಿಸಿ ಅವರು ಇದು ನಿಜವಾಗಿದ್ದರೆ ಬ್ರಿಟಿಶ ಅರಸೊತ್ತಿಗೆಯನ್ನು ನಾಶ ಮಾಡುವ ಕಾಲ ಬಂದಿದೆಯೆಂದು ಸಾರಿದ್ದರು. ಬ್ರಿಟಿಶ ಅರಸರು ಅಧಿಕಾರವಿಹೀನರೆಂದು ಹೊರಗೆ ಕಾಣಿಸಿದರೂ ಇಟಲಿಯಲ್ಲಾದಂತೆ ದೇಶಕ್ಕೆ ಇಕ್ಕಟ್ಟಿನ ಪ್ರಸಂಗ ಬಂದಾಗ ದೇಶದ್ರೋಹದ ಸಾಧನವಾಗಿ ಅವರು ವರ್ತಿಸಲು ಬೇಕಾದಷ್ಟು ಅವಕಾಶವಿದೆ ಯೆಂದು ವೆಲ್ಸರು ಎಚ್ಚರಿಸಿದ್ದರು.

ಮಾನವಕಲ್ಯಾಣಕಾಂಕ್ಷಿ ಪ್ರಾಣಿಶಾಸ್ತ್ರಜ್ಞ ವೆಲ್ಸರು ಕೊನೆ ಕಾಲದಲ್ಲಿ ಮಾನವನ ಭವಿತವ್ಯದ ಬಗ್ಗೆ ಅಶಾವಾದಿಗಳಾಗಿದ್ದಿಲ್ಲ. ಎರಡನೆ ಮಹಾಯುದ್ಧ ಮುಗಿದ ಕೆಲ ದಿನಗಳಲ್ಲಿ ಅವರು ಪ್ರಕಟಿಸಿದ ಲೇಖಮಾಲೆಯೊಂದರಲ್ಲಿ ಪಕೃತ ಸ್ವರೂಪದ ಮಾನವನ ಮುಡಿವನ್ನು ಮುಂಗಂಡಿದ್ದರು.

### ಜೀವನ ಚರಿತ್ರ

ಹರ್ಬರ್ಟ ಜಾರ್ಜ ವೆಲ್ಸರು ಸೆಪ್ಟೆಂಬರ ೨೧, ೧೮೬೬ ರಲ್ಲಿ ಹುಟ್ಟಿದರು. ಅವರ ತಂದೆ ತಾಯಿಗಳಿಬ್ಬರೂ ಕೆಳ ದರ್ಜೆಯವರು. ಅವರು ಒಂದು ಸಿಂಗಾರ ಸಾಮಗ್ರಿಯ ಅಂಗಡಿಯಿಟ್ಟುಕೊಂಡಿದ್ದರು. ಅದಕ್ಕೂ ಮೊದಲು ಅವರ ತಂದೆ ತೋಟದಲ್ಲಿ ಮಾಲಿಯಾಗಿ ದುಡಿಯುತಿದ್ದನು. ತಾಯಿ ಮದುವೆಗೆ ಮೊದಲು ಯಾರೋ ಶ್ರೀಮಂತರ ಮನೆಗೆಲಸದವಳಾಗಿದ್ದಳು. ವೆಲ್ಸರಿಗೆ ಶಾಲಾ ಶಿಕ್ಷಣವಾದುದು ಎಲ್ಲೋ ಅತ್ಯಲ್ಪ. ೧೩ ನೆ ವಯಸ್ಸಿನಲ್ಲಿಯೆ ವಿಂಡ್ಸರದಲ್ಲೊಂದು ಅಂಗಡಿಯಲ್ಲಿ ಉಗ್ರಾಣ ಕಾರಕೂನನಾಗಿ ತರಬೇತಿ ಹೊಂದಲು ಹೋದರು. ಆದರೆ ಅಲ್ಲಿ ಹಮಾಲನೊಬ್ಬನ ಜೋಡಿ ಹೊಡೆದಾಡಿದ್ದರಿಂದ ಅವರನ್ನು ಕಿತ್ತುಹಾಕಲಾಯಿತು. ಆ ಮೇಲೆ ಅವರ ಕಕ್ಕನ ಶಾಲೆಯಲ್ಲಿ ವಿದ್ಯಾರ್ಥಿ-ಶಿಕ್ಷಕನಾಗಿ ಕೆಲ ದಿನವಿದ್ದು ಪುನಃ ಕಾರಕೂನಿಕೆಗೆ ಮರಳಿದರು. ಆದರೆ ಅದು ಅವರಿಗೆ ಸೋಸಲಿಲ್ಲ. ಕೊನೆಗೆ ಅವರು ವ್ಯಾಪಾರದ ಮಾರ್ಗವನ್ನು ಪೂರ್ಣವಾಗಿ ತೆರೆದು ಕೆನ್ಸಿಂಗ್‌ಟನ್ನಿನ ರಾಯಲ್ ಸಾಯನ್ಸ ಕಾಲೇಜದಲ್ಲಿ ಪ್ರಸಿದ್ಧ ವೈಜ್ಞಾನಿಕ ಟಿ. ಎಚ್. ಹಕ್ಸ್ಲೆಯ ಕೈಕೆಳಗೆ ವಿಜ್ಞಾನ ಶಾಸ್ತ್ರವನ್ನು ಅಭ್ಯಸಿಸಿ ಪ್ರಥಮ ವರ್ಗದಲ್ಲಿ ಬಿ. ಎಸ್. ಸಿ. ಆದರು. ವೈಜ್ಞಾನಿಕ ಸಂಶೋಧನೆಯಲ್ಲಿ ಅವರಿಗೆ ತೀವ್ರ ಆಸಕ್ತಿಯಿತ್ತು ಅದರ ಫಲವಾಗಿಯೇ ಅವರ ಜಗತ್ಪ್ರಸಿದ್ಧ ಗ್ರಂಥಗಳ ಸೃಷ್ಟಿಯಾಯಿತು.

ಪದವೀಧರರಾದ ಮೇಲೆ ಅವರು ಪುನ: ಶಿಕ್ಷಕ ವೃತ್ತಿಗೆ ಮರಳಿದರು. ಆದರೆ ಪತ್ರಿಕಾ ವೃತ್ತಿಯಿಂದ್ದ ಜೀವಿಕೆ ಗಳಿಸಬಹುದೆಂದು ತೋರಿ ಶಿಕ್ಷಕ ವೃತ್ತಿಗೆ ಶರಣು ಹೊಡೆದರು. ೧೮೯೫ರಲ್ಲಿ ಅವರ ಪ್ರಥಮ ಕಾದಂಬರಿಗಳು ಹೊರಬಿದ್ದವು.

ವೆಲ್ಸರು ಲೇಖಕ ವೃತ್ತಿಗಿಳಿದೊಡನೆ ಅವರಿಗೆ ಪ್ರಚಂಡ ವಿಜಯ ದೊರೆಕೊಂಡಿತೆಂದು ಅವರ ಗೆಳೆಯರಾದ ಬರ್ನಾಡ.ಶಾ ಹೇಳುತ್ತಾರೆ. ತಮ್ಮಂತೆ

—೧೩ನೇ ಪುಟ ನೋಡಿರಿ

## ಸಪ್ಟೆಂಬರದಲ್ಲಿ ನಡುಗಾಲ ಸರಕಾರ ಸ್ಥಾಪನೆ

### ಸಪ್ಟಂಬರ ಮಧ್ಯದಲ್ಲಿ ಘಟನಾ ಸಮಿತಿ ಪ್ರಾರಂಭ

### ಕಾಂಗ್ರೆಸ ಅಧ್ಯಕ್ಷರು ಮಂತ್ರಿಗಳ ಯಾದಿಯನ್ನೊಪ್ಪಿಸಿದರು

ನಡುಗಾಲ ಸರಕಾರ ಸ್ಥಾಪಿಸುವ ಹೊಣೆ ಹೊತ್ತುಕೊಂಡ ಕಾಂಗ್ರೆಸ ಅಧ್ಯಕ್ಷ ಪಂಡಿತ ಜವಾಹರಲಾಲ ನೆಹರೂ ಇವರು ಮುಸ್ಲಿಂ ಲೀಗಿನ ಸಹಕಾರ ಪಡೆಯಲು ವಿಶೇಷ ಪ್ರಯತ್ನ ಮಾಡಿದರು. ಆದರೆ ಜಿನ್ನಾರವರ ಹಟಮಾರಿತನದ ಧೋರಣದಿಂದ ಅದು ಸಾಧ್ಯವಾಗುವಂತೆ ತೋರದ್ದುದಿಲ್ಲ. ಈಗ ಮುಸ್ಲಿಂ ಲೀಗನ್ನು ಬಿಟ್ಟುಗೊಟ್ಟ ನಡುಗಾಲ ಸರಕಾರ ಅಸ್ತಿತ್ವದಲ್ಲಿ ಬರುವ ಲಕ್ಷಣ ತೋರುತಿವೆ. ಸದ್ಯದ ಕಾರ್ಯಕ್ರಮದಂತೆ ಹೊಸ ಸರಕಾರದ ಹೆಸರಗಳು ಶನಿವಾರ ಪ್ರಸಿದ್ಧವಾಗುವವು. ಸಪ್ಟಂಬರ ಪ್ರಾರಂಭಕ್ಕೆ ಹೊಸ ಸರಕಾರ ಅಧಿಕಾರ ವಹಿಸಿಕೊಳ್ಳುವದು. ಘಟನಾ ಸಮಿತಿಯು ಸಪ್ಟೆಂಬರ ಮಧ್ಯದಲ್ಲಿ ಪ್ರಾರಂಭವಾಗುವದೆಂದು ತಿಳಿಯುತ್ತದೆ. ನಡುಗಾಲ ಸರಕಾರದಲ್ಲಿ ೧೪ ಜನರ ಬದಲು ೧೫ ಜನರಿರಬೇಕೆಂದು ಕಾಂಗ್ರೆಸ್ ವರಿಷ್ಠರು ಅಭಿಪ್ರಾಯ ಪಡುತಿರುವರೆಂದು ತಿಳಿಯುತ್ತದೆ. ಅಂದರೆ ಪಾರ್ಸಿ, ಶೀಖ ಹಿಂದೀ ಕ್ರಿಶ್ಚನ್ ಮತ್ತು ಅಂಗ್ಲೋ ಇಂಡಿಯನ್ನರಿಗೆ ಒಂದೊಂದು ಸ್ಥಳ ಕೊಡಲನುಕೂಲವಾಗುವದೆಂದು ಅವರ ಅಭಿಪ್ರಾಯ. ಹರಿಜನ ಪ್ರತಿನಿಧಿಗೆ ಕಾಂಗ್ರೆಸ್ಸಿನಲ್ಲಿಯೆ ಸ್ಥಳ ಕೊಡಲಾಗುವದು. ಅಂದರೆ ಕಾಂಗ್ರೆಸ್ಸು ೬, ಮುಸ್ಲಿಂ ಲೀಗು ೫ ಉಳಿದ ಅಲ್ಪಸಂಖ್ಯಾಕರು ೪ ಹೀಗೆ ೧೫ ಜನ ಸದಸ್ಯರು ನಡುಗಾಲ ಸರಕಾರದಲ್ಲಿರಬೇಕೆಂದು ಕಾಂಗ್ರೆಸ ವರಿಷ್ಠರ ಅಗ್ರಹ. ಸರಕಾರದವರು ಇದಕ್ಕೆ ಒಪ್ಪುವರೋ ಇಲ್ಲವೊ ಎಂಬುದು ಈ ವರೆಗೆ ತಿಳಿದಿಲ್ಲ (ಗುರುವಾರ).

ಕಾಂಗ್ರೆಸ್ ಅಧ್ಯಕ್ಷರು ಕಾಂಗ್ರೆಸ್ ಕಾರ್ಯಸಮಿತಿಯ ಸಭೆಯನ್ನು ಇದೇ ೨೭ ನೇ ತಾರೀಕಿಗೆ ದಿಲ್ಲಿಯಲ್ಲಿ ಕರೆದಿದ್ದಾರೆ. ರಾಜಕೀಯ ಪರಿಸ್ಥಿತಿಯಲ್ಲಿ ಆದ ಸ್ಥಿತ್ಯಂತರ ಮತ್ತು ಕಲಕತ್ತೆಯಲ್ಲಿನ ಮರ್ಘಟನೆಗಳ ಬಗ್ಗೆ ಈ ಸಭೆಯಲ್ಲಿ ಚರ್ಚಿಸಲಾಗುವದು. ಈ ಸಭೆಗೆ ಸದಸ್ಯರಲ್ಲದೆ ಕಳೆದ ಸಲ ಆಮಂತ್ರಿತರಾದವರೆಲ್ಲ ಬರಬೇಕೆಂದು ಬಿನ್ನವಿಸಲಾಗಿದೆ. ಈ ರೀತಿ ಕಾರ್ಯಸಮಿತಿಯ ಸಭೆ ಕರೆದದ್ದರಿಂದ ಹೊಸ ಸರಕಾರದ ಹೆಸರು ಪ್ರಸಿದ್ಧಿಸಲು ವಿಲಂಬವಾಗಬಹುದೆಂದು ಮಾತ್ರ ತಿಳಿಯಕೂಡದೆಂದು ಪಂಡಿತ ಜವಾಹರಲಾಲರು ಹೇಳಿದ್ದಾರೆ. ಇವೆರಡಕ್ಕೂ ಆ ಅರ್ಥದಲ್ಲಿ ಸಂಬಂಧವಿಲ್ಲೆಂದು ಅವರು ತಿಳಿಸಿದ್ದಾರೆ.

ಈ ನಡುಗಾಲ ಸರಕಾರದಲ್ಲಿ ಯಾರು ಯಾರು ನೇಮಕ ಹೊಂದಬಹುದೆಂಬ ಬಗ್ಗೆ ಬಗೆಬಗೆಯ ತರ್ಕವಿತರ್ಕಗಳು. ವಿಶೇಷತಃ ಮುಸ್ಲಿಂ ಸದಸ್ಯರ ಬಗ್ಗೆ ಹೆಚ್ಚು ತರ್ಕ. ಕಾಂಗ್ರೆಸಿನ ಪಂಡಿತ ಜವಾಹರಲಾಲ ನೆಹರು, ಸರದಾರ ವಲ್ಲಭಭಾಯಿ ಪಟೇಲ, ಬಾಬೂ ರಾಜೇಂದ್ರ ಪ್ರಸಾದ, ಬಾಬೂ ಶರಚ್ಚಂದ್ರ ಬೋಸ ಇವರಂತೂ ಇದ್ದೇ ಇರುವರೆಂದು ಹೇಳಲಾಗುತ್ತದೆ. ಮೌಲಾನಾ ಅಬುಲ್ ಕಲಂ ಅಜದರು ಇರುವರೊ ಇಲ್ಲವೆ ಅವರ ... ದಲ್ಲಿ ಡಾ. ಅಸಫಅಲ್ಲಿಯವರು ಬರುವರೋ ... ದಿಲ್ಲ. ಸರದಾರ ಬಲದೇವ ಸಿಂಗರು ಶೀಖರ ಪ್ರತಿನಿಧಿಗಳಾಗಬಹುದು. ಜಗಜೀವನರಾಮರು ಕಾಂಗ್ರೆಸ್ ಹರಿಜನ ಸದಸ್ಯರಾಗಿ ನೇಮಕ ಹೊಂದುವರು. ಇನ್ನುಳಿದವರ ಬಗ್ಗೆ ನಿಶ್ಚಿತವಾಗಿ ಹೇಳಲು ಬರುವದಿಲ್ಲ. ಸದ್ಯದ ಲಕ್ಷಣಗಳನ್ನು ನೋಡಿದರೆ ಮುಸ್ಲಿಂ ಲೀಗಿನವರು ಈ ಸರಕಾರದಲ್ಲಿ ಸೇರದಿದ್ದರೂ ಕಾಂಗ್ರೆಸ್ಸು ನಡುಗಾಲ ಸರಕಾರ ಸ್ಥಾಪಿಸಿಯೇ ತೀರುವುದೆಂದು ಸ್ಪಷ್ಟವಾಗಿದೆ.

## ಸಂಪಾದಕೀಯ

( ೩ನೇ ಪುಟದಿಂದ )

ಸಾರಿ ಈ ಒಂದು ರಾಷ್ಟ್ರದಲ್ಲಿ ಬಗೆಬಗೆಯ ಕಷ್ಟನಷ್ಟಗಳನ್ನನುಭವಿಸಿ ಅಗ್ನಿಪುಟ ಹೊಂದಿದ ಚಿನ್ನದಂತೆ ಓಜಸ್ವಿಯಾಗಿ ಹೊಳೆಯುತಿದೆ. ಕಳೆದ ಮಹಾಯುದ್ಧದಲ್ಲಿಯೂ ಇಂಡೋನೇಶಿಯವು ಬಹಳ ಕಷ್ಟನಿಷ್ಠುರಗಳನ್ನು ಸಹಿಸಿತು. ಪ್ರಜೆಗಳ ಒಪ್ಪಿಗೆ ಪಡೆಯದೆ ದೇಶವನ್ನು ಯುದ್ಧದಲ್ಲಿ ಕೆಡುಹಿ ಗಂಡಾಂತರ ಸಮಯದಲ್ಲಿ ಶತ್ರುಗಳಿಗೆ ಅದನ್ನು ಒಪ್ಪಿಸಿಕೊಟ್ಟು ಓಡಿ ಹೋದ ಡಚ್ಚರು ಯುದ್ಧಾನಂತರ ಬ್ರಿಟಿಶ್‌ರ ಸಹಾಯದಿಂದ ಮತ್ತೆ ಇಂಡೋನೇಶಿಯದಲ್ಲಿ ತಮ್ಮ ಪ್ರಸ್ಥ ಬೆಳೆಸಲು ಹವಣಿಸುತ್ತಿರುವರು. ಆದರೆ ಶೂರ ಇಂಡೋನೇಶಿಯನರು ತಮ್ಮ ಧುರೀಣ ಡಾ. ಸೊಯಕರ್ನೋರವರ ನೇತೃತ್ವದಲ್ಲಿ ಅವರನ್ನು ವಿರೋಧಿಸುತಿರುವರು. ಈ ಹೋರಾಟ ಇನ್ನೂ ನಡೆದಿದೆ. ಡಚ್‌ರ ಸಾಮ್ರಾಜ್ಯಶಾಹಿತ್ವದ ಸದ್ದು ಸಂಪೂರ್ಣ ಅಡಗಬೇಕಾದರೆ ಇಂಡೋನೇಶಿಯನ್‌ರು ಇನ್ನೂ ಬಹಳ ಕಷ್ಟನಿಷ್ಠುರಗಳನ್ನನುಭವಿಸಬೇಕಾಗಿದೆಂಬದು ನಿಶ್ಚಿತ. ಆದರೆ ಒಳ್ಳೆನಿರ್ಧಾರದಿಂದ ಮುನ್ನುಗ್ಗುತಿರುವ ಆ ಸ್ವಾತಂತ್ರ್ಯಪ್ರಿಯರಿಗೆ ವಿಜಯ ಕಟ್ಟಿಟ್ಟದ್ದೆ ಎಂಬುದನ್ನು ಮರೆಯಲಾಗದು. ಅವರೀ ಸ್ವಾತಂತ್ರ್ಯ ಸಂಗ್ರಾಮದಲ್ಲಿ, ಗುಲಾಮಗಿರಿಯಲ್ಲಿ ತೊಳಲಾಡುತಿರುವ ಎಲ್ಲ ರಾಷ್ಟ್ರಗಳ ಸಹಾನುಭೂತಿಯಿದೆಂದು ಬೇರೆಹೇಳಬೇಕಿಲ್ಲ. ವಿಶೇಷತಃ ಹಿಂದುಸ್ತಾನದ ಸಂಬಂಧವು ಇಂಡೋನೇಶಿಯನ್‌ರಗೂಡ ಹೆಚ್ಚಿಗಿದ್ದುದರಿಂದ ಅವರೀ ಸಂಗ್ರಾಮದಲ್ಲಿ ಹಿಂದುಸ್ತಾನವು ಹಾರ್ದಿಕ ಸಹಾನುಭೂತಿಯನ್ನು ತೋರಿಸುತಿದೆ. ಪಂಡಿತ ಜವಾಹರಲಾಲರು ಇವೆರಡು ರಾಷ್ಟ್ರಗಳಲ್ಲಿದ್ದ ... ಹಾಸಿಕ ಭೌಗೋಲಿಕ ಮತ್ತು ಸಾಂಸ್ಕೃತಿಕ ಸಂಬಂಧವನ್ನು ಈ ಮೊದಲು ವಿವರಿಸಿದ್ದಾರೆ. ಈ ಸಂಬಂಧದ ಪರಿಣಾಮವಾಗಿಯೆ ಇಂಡೋನೇಶಿಯ ಹಿಂದುಸ್ತಾನಕ್ಕೆ ಅಕ್ಕಿಯನ್ನು ಕೊಡಮಾಡಿದೆ. ಅದರೂ ಈ ಸಂಬಂಧಕ್ಕಿಂತ ನಿಕಟ ಸಂಬಂಧ ಈ ಎರಡೂ ರಾಷ್ಟ್ರಗಳಲ್ಲಿ ಬೆಳೆದು ಪರಸ್ಪರ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಸಹಾಯಕವಾಗಿರುವಲ್ಲಿ ಸಂದೇಹವಿಲ್ಲ. ಇಂಡೋನೇಶಿಯಕ್ಕೆ ಇಂದು ಇರುವ ಡಚ್ ರಾಹುವಿನ ಭಯ ಬೇಗ್ಗ ಮಾಯವಾಗಿ ಅದು ಸ್ವಾತಂತ್ರ್ಯ ಸುಖವನು ಬೇಗನೆ ಅನುಭವಿಸಲೆಂದು ಈ ಶುಭ ಪ್ರಸಂಗದಲ್ಲಿ ನಾವು ಹಾರಯಿಸುತ್ತೇವೆ.





# ಅಂತರ್‌ರಾಷ್ಟ್ರೀಯ

### ಶಾಂತಿ ಪರಿಷತ್ತಿನಲ್ಲಿ

ಪ್ಯಾರೀಸಿನಲ್ಲಿ ನಡೆಯುತ್ತಿರುವ ಶಾಂತಿ ಪರಿಷತ್ತು ಬೇಗನ ಮುಗಿಯುವ ಲಕ್ಷಣ ತೋರುವದಿಲ್ಲ ಭೂತ ಪೂರ್ವ ಶತ್ರುರಾಷ್ಟ್ರಗಳೊಡನೆ ಮಾಡಿಕೊಳ್ಳಬೇಕಾದ ಒಪ್ಪಂದದ ಕಂಡುಗಳ ವಿಷಯಕ್ಕೆ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಗೊಳಿಸಲು ಆಯಾ ಶತ್ರು ರಾಷ್ಟ್ರಗಳಿಗೆ ಅವಕಾಶವನ್ನು ಕೊಟ್ಟದ್ದಲ್ಲದೆ, ಇರಾಣ, ಮೆಕ್ಸಿಕೋ, ಮೊದಲಾದ ಬೇರೆ ಕೆಲವು ಪರಿಷತ್ತಿನ ಸದಸ್ಯರಲ್ಲದಿದ್ದ ರಾಷ್ಟ್ರಗಳಿಗೂ ಆ ಒಪ್ಪಂದಗಳ ಬಗೆಗೆ ಅಭಿಪ್ರಾಯವನ್ನು ವ್ಯಕ್ತಗೊಳಿಸುವ ಸಲುವಾಗಿ ಕರೆಯಲಾಗಿದೆ.

ಫಿನ್ಲಂಡು ತನ್ನ ಮೇಲೆ ಹೊರಿಸಲಾದ ಕರಾರುಗಳಿಗೆ ಆಕ್ಷೇಪವೆತ್ತಿ, ಸೊವಿಯೆಟ್ಟಿಗೆ ಬಿಟ್ಟುಕೊಡಬೇಕೆಂದು ಹೇಳಲ್ಪಟ್ಟ ಕೆಲವು ಭೂಭಾಗಗಳ ಬಗ್ಗೆ ವಿರೋಧ ಪ್ರದರ್ಶಿಸಿದೆ.

ಆಸ್ಟ್ರಿಯಾ ಇಟಲಿಯಿಂದ ಟಾಯರೋಲ ಪ್ರಾಂತವನ್ನು ಬೇಡಿದೆ.

ಬಲ್ಗೇರಿಯಾದ ಪ್ರತಿನಿಧಿ ಗ್ರೀಸು ಬೇಡಿದ ಕೆಲ ಪ್ರದೇಶಗಳ ಬಗ್ಗೆ ಆಕ್ಷೇಪವೆತ್ತಿದ್ದಾನೆ.

ಫಿನ್ಲಂಡಿನ ಒಪ್ಪಂದದ ಪ್ರಶ್ನೆಯನ್ನು ಕೆಲಕಾಲ ತಡೆಹಿಡಿಯಬೇಕೆಂದು ನಿರ್ಣಯಿಸಲ್ಪಟ್ಟದೆ.

ಐದೂ ಶತ್ರುರಾಷ್ಟ್ರಗಳ ಪ್ರತಿನಿಧಿಗಳು ತಮಗೆ ಸವಲತ್ತು ತೋರಿಸಬೇಕೆಂದು ಪ್ರಾರ್ಥಿಸಿವೆ.

ಹೀಗೆ ಎಲ್ಲ ಪ್ರಶ್ನೆಗಳ ತೀರ್ಮಾನವಾಗಬೇಕಾದರೆ ಸೆಪ್ಟೆಂಬರ ೧೫ ರೊಳಗೆ ಸಾಗುವಂತಿಲ್ಲವೆಂದು ತೋರುತ್ತದೆ. ಅಷ್ಟುಹೊತ್ತಿಗೆ ಯುಕ್ತರಾಷ್ಟ್ರಗಳ ಅಧಿವೇಶನ ಪ್ರಾರಂಭವಾಗತಕ್ಕದ್ದಿದೆ. ಶಾಂತಿಪರಿಷತ್ತಿನ ಕಾರ್ಯಕಲಾಪ ಮುಗಿಯುವ ವರೆಗೆ ಯುಕ್ತರಾಷ್ಟ್ರ ಅಧಿವೇಶನವನ್ನು ಮುಂದೂಡಬೇಕೆಂದು ಸೋವಿಯಟ್ ಹಾಗೂ ಅಮೇರಿಕನ್ ಪ್ರತಿನಿಧಿಗಳು ಒತ್ತಾಯಗೊಳಿಸುತಿರುವರೆಂದು ವರದಿಯಾಗಿದೆ.

### ಡಾರ್ಡೆನಲ್ಸ ಪ್ರಶ್ನೆ

ಸೋವಿಯಟ್ ಸರಕಾರ ಡಾರ್ಡೆನೆಲ್ಸ ನಿಯಂತ್ರಣದ ಬಗ್ಗೆ ಇರುವ ಮಾಂಟ್ರೊ ಒಪ್ಪಂದದ ಪುನರ್ವಿಮರ್ಶೆಯಾಗಬೇಕೆಂದು ಒಮ್ಮಿಂದೊಮ್ಮೆ ತುರ್ಕಿಗೆ ಡಾಯಸ ಕಳಿಸಿರುವದರಿಂದ ಊಹಿಸಿದಂತೆಯೆ ಅಂತರ್‌ರಾಷ್ಟ್ರೀಯ ಸಂಬಂಧದಲ್ಲಿ ಬಹಳ ದೊಡ್ಡ ಕಲಮಲವೆದ್ದಿದೆ. ಎಷ್ಟರ ವರೆಗೆಂದರೆ, ಶಾಂತಿ ಪರಿಷತ್ತಿನ ಭವಿತವ್ಯ ಕೂಡ ಈ ಪ್ರಶ್ನೆಯು ಸಮಂಜಸ ತೀರ್ಮಾನವನ್ನು ಹೊಂದಿಕೊಂಡಿದೆಯೆಂದು ಭಾವಿಸಲ್ಪಟ್ಟಿದೆ.

ಒಪ್ಪಂದದ ಪುನರ್ವಿಮರ್ಶೆಯಾಗಬೇಕೆಂಬುದಕ್ಕೆ ಸೋವಿಯಟ್ಟು ಕೊಟ್ಟ ಕಾರಣವೇನೊ ನ್ಯಾಯವಾಗಿಯೆ ಇದೆ. ಡಾರ್ಡೆನೆಲ್ಸ ಜಲಸಂಧಿಯ ರಕ್ಷಣೆಯ ಹೊಣೆ ಹೊತ್ತ ತುರ್ಕಿ ಕಪ್ಪು ಸಮುದ್ರದ ರಾಷ್ಟ್ರಗಳ ಸಂರಕ್ಷಣ ವ್ಯವಸ್ಥೆಯ ಹಿತವನ್ನು ರಕ್ಷಿಸಲು ಸಮರ್ಥವಾಗಿಲ್ಲವೆಂದು ಮೊನ್ನೆ ಮುಗಿದ ಮಹಾಯುದ್ಧದ ಕಾಲಕ್ಕೆ ಸ್ಪಷ್ಟವಾಗಿ ನಿದರ್ಶನಕ್ಕೆ ಬಂತೆಂದು ಅದು ತಿಳಿಸಿದೆ. ಶತ್ರು ರಾಷ್ಟ್ರಗಳ ಯುದ್ಧ ಹಡಗುಗಳು ಆ ಜಲಸಂಧಿಯಿಂದ ಕಪ್ಪು ಸಮುದ್ರದೊಳ ಹೊಕ್ಕು ಸೋವಿಯಟ್ಟರನ್ನು ಪೀಡಿಸಿದವೆಂದು ಮೊದಲಿಂಪ ಹೇಳಲಾಗಿದೆ. ಈ ಸೋವಿಯೆಟ್ ದೂರನ್ನು ಬರ್ಲಿನ್ ಪರಿಷತ್ತಿನಲ್ಲಿ ತ್ರಿಮೂರ್ತಿಗಳು ಅಂಗೀಕರಿಸಿ ಒಪ್ಪಂದದ ಪುನರ್ವಿಮರ್ಶೆಯಾಗಬೇಕೆಂದು ಒಪ್ಪಿದ್ದವು. ತುರ್ಕಿಯೊಂದೇ ಜಲಸಂಧಿಯ ಸಂರಕ್ಷಣೆಗೆ ಸಮರ್ಥವಾಗಿಲ್ಲವಾದುದರಿಂದ ಸೋವಿಯೆಟ್ಟಿಗೂ ಅದರಲ್ಲಿ ಪಾಲು ದೊರೆಯಬೇಕೆಂದು ಅದು ಬೇಡಲು ಕಾರಣವಾಗಿದೆ.

ಹೊಸ ಒಪ್ಪಂದಕ್ಕೆ ಸೋವಿಯೆಟ್ಟು ಸೂಚಿಸಿದ ತಳಹದಿ ಐದು ಮುದ್ದೆಗಳಿಂದ ಕೂಡಿದೆ:

೧. ಜಲಸಂಧಿಯಲ್ಲಿ ಎಲ್ಲ ರಾಷ್ಟ್ರಗಳ ವ್ಯಾಪಾರಿ ಹಡಗುಗಳಿಗೆ ಪ್ರವೇಶವಿರಬೇಕು.

೨. ಯಾವಾಗಲೂ ಅದರಲ್ಲಿ ಕಪ್ಪು ಸಮುದ್ರ ರಾಷ್ಟ್ರಗಳ ಯುದ್ಧಹಡಗುಗಳಿಗೆ ಪ್ರವೇಶವಿರಬೇಕು.

೩. ಕಪ್ಪು ಸಮುದ್ರದ ಹೊರಗಿನ ರಾಷ್ಟ್ರಗಳಲ್ಲಿ ಪ್ರತ್ಯೇಕವಾಗಿ ಈ ಮೂಲಕ ವ್ಯವಸ್ಥೆ ಮಾಡಿದವುಗಳ ಹೊರತು ಉಳಿದ ರಾಷ್ಟ್ರಗಳ ಯುದ್ಧ ಹಡಗಗಳಿಗೆ ಬರಹೋಗುವ ಅವಕಾಶವಿರತಕ್ಕದ್ದಲ್ಲ.

೪. ಈ ಜಲಸಂಧಿಯೊಂದೆ ಕಪ್ಪುಸಮುದ್ರಕ್ಕೆ ಬರಹೋಗುವ ಮಾರ್ಗವಾದುದರಿಂದ ಅದರ ವ್ಯವಸ್ಥೆ ನಡೆಸುವದು ತುರ್ಕಿ ಹಾಗು ಕಪ್ಪುಸಮುದ್ರದ ರಾಷ್ಟ್ರಗಳ ಅಧಿಕಾರವಾಗಿರಬೇಕು.

೫. ವ್ಯಾಪಾರಿ ಹಡಗುಗಳ ಬರಹೋಗುಗಳನ್ನು ನಿರಾತಂಕವಾಗಿ ಮಾಡಲು ಮತ್ತು ಜಲಸಂಧಿಯನ್ನು ಸಂರಕ್ಷಿಸಲು ಎಲ್ಲರಿಗಿಂತ ತುರ್ಕಿ ಹಾಗು ಸೋವಿಯೆಟ್ ಯೂನಿಯನ್ನಿಗೆ ಹೆಚ್ಚಿನ ಆಸ್ಥೆಯೂ ಸಾಮರ್ಥ್ಯವೂ ಇರುವದರಿಂದ ಕಪ್ಪು ಸಮುದ್ರದ ಯಾವದೇ ರಾಜ್ಯಕ್ಕೆ ಅಹಿತವಾಗವಂತೆ ವೈರಿರಾಷ್ಟ್ರವಾವುದೂ ಈ ಸಮುದ್ರವನ್ನು ಉಪಯೋಗಿಸಿಕೊಳ್ಳದ ರೀತಿಯಲ್ಲಿ ಅದನ್ನು ಸಂರಕ್ಷಿಸುವ ಹೊಣೆ ಈ ಎರಡು ರಾಷ್ಟ್ರಗಳಿಗೇ ಸೇರಿರಬೇಕು.

### ಆಂಗ್ಲೋ ಅಮೇರಿಕನ್ನರ ವಿರೋಧ

ತನ್ನ ಪ್ರಚಂಡನಾದ ನೆರೆಯವನನ್ನು ಕುರಿತು ತುರ್ಕಿಗೆ ಯಾವಾಗಲೂ ಭಯ, ಯಾವಾಗಲೂ ಶಂಕೆ ಇದ್ದದ್ದೆ. ತುರ್ಕಿಯ ಎರಡು ಜಿಲ್ಲೆಗಳನ್ನು ಸೋವಿಯೆಟ್ಟು ಬೇಡಿದ್ದು, ತುರ್ಕಿಯಲ್ಲಿರುವ ಆರ್ಮೇನಿಯನ್ ಜನರಲ್ಲಿ ತುರ್ಕಿಯ ವಿರುದ್ಧ ಪ್ರಚಾರ ನಡೆಸಿರುವದು, ತುರ್ಕಿಯಲ್ಲಿರುವ ಕುರ್ದ ಜನರಲ್ಲಿ ಸ್ವಾತಂತ್ರ್ಯದ ಚಳವಳಿಯೇಳಲು ಸಹಾಯ ಮಾಡಿದ್ದು ಮತ್ತು ಎಲ್ಲಕ್ಕೂ ಮಿಗಿಲಾಗಿ ಸೋವಿಯೆಟ್ ಕಮ್ಯುನಿಜಂ ಮೇಲೆ ತುರ್ಕರ ಮುಂದಾಳುಗಳಿಗಿರುವ ದ್ವೇಷ ಇವು ಆ ಎರಡು ರಾಷ್ಟ್ರಗಳಲ್ಲಿ ಮೊದಲೇ ವೈಷಮ್ಯವನ್ನು ಬೆಳೆಸಿಟ್ಟಿದ್ದವು. ಸೋವಿಯಟ್ಟಿನ ಬೆಳೆಯುತಿರುವ ಶಕ್ತಿಯನ್ನು ಕಂಡು ದಂಗುಬಡಿದಿರುವ ಅಂಗ್ಲೋ ಅಮೇರಿಕನ್ನರಾದರೂ ಭಯಗೊಂಡ ತುರ್ಕಿಯನ್ನು ಮಧ್ಯಪೂರ್ವದಲ್ಲಿ ಸೋವಿಯೆಟ್ ವಿರುದ್ಧ ಗುರಾಣಿಯನ್ನಾಗಿ ಉಪಯೋಗಿಸಲು ಬಯಸಿದ್ದಾರೆ. ಅರಬ ರಾಷ್ಟ್ರಗಳಲ್ಲಿ ಕೆಲವು ತುರ್ಕಿಯೊಡನೆ ಮಾಡಿಕೊಂಡ ಮತ್ತು ಇನ್ನೂ ಮಾಡಿಕೊಳ್ಳಲಿರುವ ಪರಸ್ಪರ ಸಹಾಯ ಒಪ್ಪಂದಗಳಲ್ಲಿ ಬ್ರಿಟನಿನ ಕೈಯಿದೆಯೆಂದು ಈ ಪುಟದಲ್ಲಿ ಹಿಂದೊಮ್ಮೆ ವಿವೇಚಿಸಲಾಗಿತ್ತು. ಡಾರ್ಡೆನೆಲ್ಸದ ವಿಷಯದಲ್ಲಿ ಸೋವಿಯಟ್ ರಾಯಸ ಹೊರಟಂದಿನಿಂದ ತುರ್ಕಿಗೆ ಸೋವಿಯಟ್ ವಿರುದ್ಧ ಅಂಗ್ಲೋ—ಅಮೇರಿಕನ್ ಬೆಂಬಲ ಹೆಚ್ಚಾಗಿ ದೊರೆಯತೊಡಗಿದೆ. ಡಾರ್ಡೆನೆಲ್ಸ ಜಲಸಂಧಿಯ ವ್ಯವಸ್ಥೆ ಕಪ್ಪುಸಮುದ್ರ ರಾಷ್ಟ್ರಗಳಿಗೆ ಮಾತ್ರ ಸೇರಿರಬೇಕೆಂದು ಸೋವಿಯಟ್ ರಾಯಸದ ೪ನೆ ಮುದ್ದೆ ಹೇಳುತಿರುವದರಿಂದ ಅಂಗ್ಲೋ—ಅಮೇರಿಕನ್ನರ ಎದೆ ಹಾರಿ ಹೋದಂತಾಗಿದೆ. ಅಂಗ್ಲೋ—ಅಮೇರಿಕನ್ನರನ್ನು ಕಪ್ಪು ಸಮುದ್ರದಿಂದ ಹೊರಗಿರಿಸುವ ಉಪಾಯವಿದೆಂದು ಅವರು ಭಾವಿಸಿದ್ದಾರೆ. ಹೀಗಾಗಿ ತುರ್ಕಿ, ಇಂಗ್ಲಂಡ, ಅಮೇರಿಕೆ ಇವು ಮೂರೂ ಸೋವಿಯಟ್ ರಾಯಸದ ಈ ಅಂಶವನ್ನು ಪ್ರತಿಭಟಿಸಿ ಡಾರ್ಡೆನೆಲ್ಸ ವ್ಯವಸ್ಥೆ ಅಂತರ್‌ರಾಷ್ಟ್ರೀಯ ಪರಿಷತ್ತಿನಿಂದಲೇ ಆಗಬೇಕು, ಕಪ್ಪುಸಮುದ್ರ ರಾಷ್ಟ್ರಗಳಷ್ಟೇ ಅದನ್ನು ನಿರ್ಣಯಿಸಕೂಡದು, ಎಂದು ಕಠೋರವಾಗಿ ಸೂಚಿಸುವ ಉತ್ತರವನ್ನು ಸೋವಿಯಟ್ ಸರಕಾರಕ್ಕೆ ಕಳಿಸಿವೆ.

### ಮಧ್ಯಪೂರ್ವದಲ್ಲಿ ಕಾರ್ಸ್ಥಾನಗಳು

ಹೀಗೆ ಪರಿಸ್ಥಿತಿ ಕೆಡುತಿರಲು ಮಧ್ಯಪೂರ್ವದಲ್ಲಿ ಪ್ರಮುಖ ರಾಷ್ಟ್ರಗಳು ಪರಸ್ಪರ ಬೆದರಿಕೆ ಹಾಕುವ ಚಲನವಲನಗಳನ್ನು ಪ್ರಾರಂಭಿಸಿವೆ. ತುರ್ಕಿಯ ದೃಢವಾದ ಉತ್ತರಕ್ಕೆದುರಾಗಿ ಸೋವಿಯಟ್ಟು ಬಲ ಪ್ರಯೋಗ ಮಾಡಬಹುದೆಂಬ ಶಂಕೆ ಅಂಗ್ಲೋ-ಅಮೇರಿಕನ್ನರನ್ನು ಆವರಿಸಿದೆಯೆಂದು ತೋರುತ್ತದೆ. ತುರ್ಕಿಗೆ ರಸಿಯಾದ ರಾಯಸ ಹೋದ ಸಮಯಕ್ಕೆ "ಯುರೋಪಿನಲ್ಲಿ ಮಿತ್ರಬಲಗಳಿಗೆ ಬೆಂಬಲವೀಯುವ" ನೆವದಿಂದ ದೊಡ್ಡ ಅಮೇರಿಕನ್ ಯುದ್ಧ ಹಡಗೊಂದು ಭೂಮಧ್ಯ ಸಮುದ್ರದಲ್ಲಿ ಸಜ್ಜಾಗಿ ಬಂದು ನಿಂತಿದೆ. ಪೂರ್ವ ಯುರೋಪನ್ನೆಲ್ಲ ತನ್ನ ಹಿಂದುಗಡೆ ಎಳೆದುಕೊಂಡು ಹೊರಟಿರುವ ರಶಿಯಾದ ಮತ್ತು ಅದರ ಬೆಂಬಲಿಗರ ವಿರುದ್ಧ ಅಂಗ್ಲೋ—ಅಮೇರಿಕನ್ನರ ಧೋರಣೆ ಕಠೋರವಾಗುತ್ತ ನಡೆದಿದೆ. ವಿವಾದಕ್ಕೊಳಗಾದ ಟ್ರೆಸ್ಟೆ ಪ್ರದೇಶದಲ್ಲಿ ಪ್ರವೇಶಿಸಿದ ಕೆಲ ಯುಗೊಸ್ಲಾವ್ ಸೈನಿಕರನ್ನು ಮಿತ್ರ ಸೈನಿಕರು ತಡೆದು ಇಬ್ಬರನ್ನು ಕೊಂದರೆಂದು ಯುಗೊಸ್ಲಾವ ಸರಕಾರ ಹೊಯ್ಕೊಂಡಿದ್ದರೆ ಯುಗೊಸ್ಲಾವ್ ಆಕಾಶದಲ್ಲಿ ಹಾರುತಿದ್ದ ಎರಡು ನಿರಪಾಯ ಅಮೇರಿಕನ್ ವಿಮಾನಗಳನ್ನು ಯುಗೊಸ್ಲಾವರು ಹೊಡೆದು ಕೆಡಹಿದ್ದನ್ನು ಅಂಗ್ಲೋ ಅಮೇರಿಕನ್ನರು ತೀಕ್ಷ್ಣವಾಗಿ ಪ್ರತಿಭಟಿಸಿದ್ದಾರೆ. ಸೋವಿಯಟ್ ಬೆಂಬಲಕ್ಕೆ ಬಂದಿರುವ ಪೋಲಂಡದಲ್ಲಿ ಈಚೆಗೆ ನಡೆದ ಘಟನಾವಿಷಯಕ ಜನಮತಸಂಗ್ರಹದಲ್ಲಿ ವಿರೋಧಿ ಪಕ್ಷದವರು ಮತಕೊಡದಂತೆ ಅಯೋಗ್ಯ ಉಪಾಯಗಳನ್ನು ಸರಕಾರ ನಡೆಸಿತೆಂದು ಅಂಗ್ಲೋ ಅಮೇರಿಕನ್ನರು ನಿಷೇಧಿಸಿದ್ದಾರೆ. ಆದರೆ ಗ್ರೀಕ್ ಸರಕಾರ ಇವರ ಬೆನ್ನ ಹಿಂದಿರುವದರಿಂದ ಅದು ನಾಳೆ ಸೆಪ್ಟೆಂಬರ ೧ ಕ್ಕೆ ಅರಸನ ಭವಿತವ್ಯದ ನಿರ್ಣಯಕ್ಕಾಗಿ ಜನಮತ ಸಂಗ್ರಹ ಮಾಡಲೆಳಸಿ, ಅದರ ಪರಿಣಾಮ ತಮಗೆ ಅನುಕೂಲವಾಗಬೇಕೆಂದು ಜನಾಭಿಪ್ರಾಯವನ್ನು ಹತ್ತಿಕ್ಕುವ ಕ್ರೂರ ಉಪಾಯಗಳನ್ನು ಕೈಕೊಂಡಿದ್ದರೂ ಅದಕ್ಕೆ ಅಂಗ್ಲೋ-ಅಮೇರಿಕನ್ನರು ಅಪ್ರತ್ಯಕ್ಷ ಬೆಂಬಲವಿತ್ತಿದ್ದಾರೆ.

ಇವಲ್ಲದೆ ಮಿಲಿಟರಿ ಸನ್ನಾಹಗಳೂ ನಡೆದಿವೆಯೆಂಬಲ್ಲಿ ಸಂಶಯವಿಲ್ಲ. ಬಸರಾಕ್ಕೆ ಹಿಂದೀ ಸೈನ್ಯವನ್ನು ಕಳಿಸುವಲ್ಲಿ ಇರಾಣದ ಬ್ರಿಟಿಶ ಎಣ್ಣೆಗಣಿಗಳ ರಕ್ಷಣೆಯ ಉದ್ದೇಶವೆಷ್ಟೋ ಅಷ್ಟೇ ಸೋವಿಯಟ್‌ರಿಗೆ ಬೆದರಿಕೆ ಹಾಕುವದೂ ಇದೆಯೆಂದು ತೋರುತ್ತದೆ. ಈಚೆಗೆ ಬ್ರಿಟಿಶ ಎಣ್ಣೆಗಣಿಗಳಿರುವ ಪ್ರದೇಶದ ಗಡಿಯುಗುಂಟ ಇರಾಕದ ಎರಡು ನಗರಗಳಲ್ಲಿ ಬ್ರಿಟಿಶ ಸೈನ್ಯಗಳನ್ನು ಸಂಗ್ರಹಿಸಲಾಗಿದೆಯೆಂದು ವರದಿಯಾಗಿದೆ. ಯಾವದೇ ಸಂದರ್ಭದಲ್ಲಿ ಅವು ಸೋವಿಯಟ್ಟಿಗೆ ಅನುಕೂಲವಾಗಿ ತಿರುಗಿರುವ ಇರಾಣದಲ್ಲಿ ಪ್ರವೇಶಿಸಬಹುದು. ಇರಾಕದಲ್ಲಿರುವ ಪ್ರಮುಖ ಕೂಲಿಕಾರ ಮುಂದಾಳುಗಳ ಬಂಧನವೂ ಆಗಿದೆಯೆಂದು ಹೇಳಲಾಗಿದೆ. ಈ ಬ್ರಿಟಿಶ ಚಲನವಲನಗಳನ್ನು ಅನುಲಕ್ಷಿಸಿ ಅತ್ತ ಸೋವಿಯಟ್ ಸರಕಾರವೂ ತನ್ನ ಸಿದ್ಧತೆ ತಾನು ನಡೆಸಿರುವಂತಿದೆ. ಇರಾಣದ ಉತ್ತರ ಗಡಿಯಾಚೆ ರಶಿಯವೂ ದೊಡ್ಡ ಸೈನ್ಯ ಸಂಗ್ರಹ ಮಾಡಿದೆಯೆಂದು ಇರಾಣದ ಅಮೇರಿಕನ್ ರಾಯಭಾರಿ ಡಾ. ಹುಸೇನ ಅಲಾ ಪ್ರಕಟಿಸಿದ್ದಾನೆ.

### ಸ್ಟಾಲಿನ್ನರ ಎಚ್ಚರಿಕೆ

ಇದೆಲ್ಲದಕ್ಕೆ ಕಿರೀಟಪ್ರಾಯವಾಗಿ ಸ್ಟಾಲಿನ್ನರು ಮೊನ್ನೆ ಒಂದು ಎಚ್ಚರಿಕೆಯನ್ನು ಘೋಷಿಸಿದ್ದಾರೆ "ಘಟನೆಗಳ ಸರಣಿ ಬೇರಾವ ತರ್ಕ ಸರಣಿಗಿಂತ ಮಹತ್ವದ್ದು" ಎಂಬ ಶುದ್ಧ ವ್ಯವಹಾರವಾದಿಯಾದ ಸ್ಟಾಲಿನ್ನರು ಜಗತ್ತಿನ ಘಟನೆಗಳನ್ನು ಸೂಕ್ಷ್ಮವಾಗಿ ಅವಲೋಕಿಸಿ, ಸೋವಿಯಟ್ ರಾಷ್ಟ್ರ ತನ್ನ ಸೈನ್ಯಶಕ್ತಿಯನ್ನು ಹೆಚ್ಚಿಸಿಕೊಳ್ಳುವ ಅವಶ್ಯಕತೆಯನ್ನು ಒತ್ತಿ ಹೇಳಿದ್ದಾರೆ. ಜಾಗತಿಕ ಪ್ರತಿಗಾಮಿ ಶಕ್ತಿಗಳು ಯುದ್ಧದ ಬೀಜವನ್ನು ಬಿತ್ತಲು ಪ್ರಯತ್ನಿಸುತಿವೆಯೆಂದು ಅವರು ಸ್ಪಷ್ಟವಾಗಿ ಸಾರಿ ಲೆನಿನ್ನರ ಆದೇಶವನ್ನು ಅನುಸರಿಸಿ ಅಂಥ ಯುದ್ಧಕ್ಕೆ ರಾಷ್ಟ್ರ ಯಾವಾಗಲೂ ಸಿದ್ಧವಾಗಿರಬೇಕೆಂದು ಎಚ್ಚರಿಸಿರುವರು. ಬರಿ ಶಾಂತಿವಾದದಿಂದ ಯಾವ ಫಲವೂ ಇಲ್ಲವೆಂದು ಅವರು ಕಂಡುಕೊಂಡಿದ್ದಾರೆ.

ಹೀಗೆ ಎರಡನೆ ಮಹಾಯುದ್ಧದ ಪ್ರತಿಧ್ವನಿ ಇನ್ನೂ ಅಡಗದೆ ಇರುವಾಗಲೆ, ಶಾಂತಿ ಪರಿಷತ್ತು ಕೂಡಿರುವಾಗಲೆ ಹೊಸ ಪ್ರಚಂಡ ಅಶಾಂತಿಯ ಕರಾಳ ಸಂಜ್ಞೆಗಳು ಮಧ್ಯಪೂರ್ವವನ್ನು ಆವರಿಸಿವೆ.

### ಪಾಲಿಸ್ತಾನ ಪರಿಸ್ಥಿತಿ

ಪಾಲಿಸ್ತಾನದ ಹತ್ಯಾಕಾಂಡ ತಾತ್ಕಾಲಿಕವಾಗಿ ಶಾಂತವಾಗಿದ್ದರೂ ಬೇಗನೆ ಯಹೂದ್ಯ ಭಯೋತ್ಪಾದಕರು ಹೊಸ ಕಾಂಡಗಳನ್ನು ಪ್ರಾರಂಭಿಸುವರೆಂಬ ಭೀತಿಯಿಂದ ಬ್ರಿಟಿಶರು ಕಣ್ಣಲ್ಲಿ ಎಣ್ಣೆ ಹಾಕಿಕೊಂಡು ಕಾದಿರಬೇಕಾಗಿದೆ. ಕೈಥಾ ರೇಲ್ವೆ ವರ್ಕಶಾಪಿನ ಮೇಲೆ ದಾಳಿಮಾಡಿ ... ಪ್ರಕರಣದಲ್ಲಿ ಮಿಲಿಟರಿ ಕೋರ್ಟಿನಲ್ಲಿ ವಿಚಾರಣೆಗೊಳಗಾದ ಯಹೂದ್ಯ ಕ್ರಾಂತಿಕಾರರಲ್ಲಿ ೧೮ ಯುವಕರಿಗೆ ಮರಣದಂಡನೆ ಇಬ್ಬರು ಯುವತಿಯರಿಗೆ ಅಜನ್ಮ ಶಿಕ್ಷೆ ವಿಧಿಸಲ್ಪಟ್ಟಿದ್ದರಿಂದ ಉದ್ರಿಕ್ತರಾದ ಯಹೂದ್ಯರು ಸೇಡು ತೀರಿಸಿಕೊಳ್ಳಲು ಪ್ರಯತ್ನಿಸಬಹುದೆಂದು ಪರೀಕ್ಷಿಸಲಾಗಿದೆ. ಅಕ್ರಮ ಯಹೂದ್ಯ ವಲಸೆಗಾರರನ್ನು ಇನ್ನೂ ಗಡೀಪಾರು ಮಾಡುತ್ತಲೆ ಇರುವದು.

ಲಂಡನ್ನಿನಲ್ಲಿ ಪಾಲಿಸ್ತಾನದ ಭವಿಷ್ಯವನ್ನು ಬ್ರಿಟಿಶರು ಕರೆಯಲಿರುವ ಪರಿಷತ್ತಿನಲ್ಲಿ ಭಾಗವಹಿಸಲು ಅರಬ ರಾಷ್ಟ್ರಗಳಲ್ಲಿ ಕೆಲವು ಒಪ್ಪಿಕೊಂಡಿವೆ. ಆದರೆ ಪಾಲಿಸ್ತಾನ ವಿಭಜನೆಯ ಯೋಜನೆಯನ್ನು ಅಧ್ಯಕ್ಷ ಟ್ರೂಮನ್ನರು ಒಪ್ಪಿಯೂ ಇಲ್ಲ ತಿರಸ್ಕರಿಸಿಯೂ ಇಲ್ಲ ಎಂದು ತಿಳಿಯುತ್ತದೆ. ಪಾಲಿಸ್ತಾನದ ಆದಿಷ್ಟ ಅಧಿಕಾರವನ್ನು ಪಡೆದ ಬ್ರಿಟಿಶ ಸರಕಾರವೇ ಈ ಸಮಸ್ಯೆಯನ್ನು ಬಗೆಹರಿಸಬೇಕು. ಇಲ್ಲದಿದ್ದರೆ ಪಾಲಿಸ್ತಾನವನು ಅಂತರ್‌ರಾಷ್ಟ್ರೀಯ ವಿಶ್ವಸ್ತ ಮಂಡಲಕ್ಕೊಪ್ಪಿಸಿ ಬಿಡಬೇಕು ಎಂದು ಅವರು ಹೇಳಬಹುದು. ಅಂಥ ಸಂದರ್ಭದಲ್ಲಿ ಪಾಲಿಸ್ತಾನದ ಮೇಲಿನ ಆದಿಷ್ಟಾಧಿಕಾರವನ್ನು ಇಂಗ್ಲಂಡು ಬಿಟ್ಟುಕೊಡಲು ಸಿದ್ಧವಾಗಬಹುದೆಂದೂ ಮೊನ್ನಿನ ಸಭೆಯೊಂದರಲ್ಲಿ ಬ್ರಿಟಿಶ ಮಂತ್ರಿಮಂಡಲ ಇದನ್ನೇ ಚರ್ಚಿಸಿತೆಂದೂ ತಿಳಿಯುತ್ತದೆ.

### ಇಜಿಪ್ತದಲ್ಲಿ ಮಾತುಕತೆ ಮುರಿಯಿತು

೧೯೩೬ ರ ಅಂಗ್ಲೊ-ಇಜಿಪ್ಶಿಯನ್ ಒಪ್ಪಂದದ ಪುನರ್ವಿಮರ್ಶೆಗಾಗಿ ಕಳೆದ ಅನೇಕ ತಿಂಗಳಿಂದ ನಡೆದಿದ್ದ ಅಂಗ್ಲೊ—ಇಜಿಪ್ಶನ್ ಮಾತುಕತೆ ಮುರಿದು ಹೋಯಿತೆಂಬ ಸುದ್ದಿ ಇದೀಗ ಬಂದಿದೆ. ಲಂಡನ್ನಿನಲ್ಲಿರುವ ಬ್ರಿಟಿಶ ರಾಯಭಾರಿ ಕೆಲ ದಿನಗಳ ಹಿಂದೆ ಆಕಸ್ಮಾತ್ತಾಗಿ ಸ್ವದೇಶಕ್ಕೆ ಬಂದಾಗ ತನ್ನ ಸರಕಾರಕ್ಕೆ ವರದಿ ಮಾಡಿದ್ದು ಮೊದಲಾದ ಘಟನೆಗಳಿಂದ ಮಾತುಕತೆ ಅತ್ಯಂತ "ಸೂಕ್ಷ್ಮ ಅವಸ್ಥೆಗೆ" ಮುಟ್ಟಿದೆಯೆಂದು ರಾಜಕೀಯ ನಿರೀಕ್ಷಕರು ಅಭಿಪ್ರಾಯಪಡುತಿದ್ದರು. ರಾಯಭಾರಿ ಅಮುರಪಾಶಾ ಅವರ ಕೈಯಲ್ಲಿ ಬ್ರಿಟಿಶ ಸರಕಾರದವರು ತಮ್ಮ ಕೊನೆಯ ಮಾತನ್ನು ಹೇಳಿಕಳಿಸಿದ್ದರಂತೆ.

ಭಿನ್ನಾಭಿಪ್ರಾಯಕ್ಕೆ ಕಾರಣವಾದ ಮುಖ್ಯ ಅಂಶಗಳು ಮೂರು :

ಮೊದಲನೆಯದಾಗಿ, ಸುಡಾನದ ಮೇಲೆ ಇಜಿಪ್ತು ಸಾರ್ವಭೌಮಾಧಿಕಾರವನ್ನು ಬೇಡಿತ್ತು. ಇದನ್ನು ಬ್ರಿಟನ್ನು ನಿರಾಕರಿಸಿತ್ತು. ["ನೀಲನದಿ ಕಣಿವೆಯ ಐಕ್ಯ" ದ ತತ್ವವನ್ನು ಅನುಸರಿಸಿ ಸುಡಾನ್ ದೇಶ ಇಜಿಪ್ತದ ಭಾಗವಾಗಬೇಕೆಂದು ಇಜಿಪ್ತು ಪ್ರತಿಪಾದಿಸಿತ್ತು. ಆದರೆ ಸುಡಾನದ ಹಿಂದುಳಿದ ಜನರಲ್ಲಿ ಇಜಿಪ್ಶನ್ನರ ಬಗ್ಗೆ ಸಂಶಯ ಹುಟ್ಟಿಸಿ ಬ್ರಿಟಿಶರು ಅವರ ಸಂರಕ್ಷಣೆಯ ನೆವ ಮುಂದೊಡ್ಡಿದ್ದಾರೆ.]

ಎರಡನೆಯದಾಗಿ, ಇಜಿಪ್ತಿನಿಂದ ಬ್ರಿಟಿಶ ಸೈನ್ಯ ಹೊರಟು ಹೋಗಲು ಐದು ವರ್ಷ ಅವಧಿಯನ್ನು ಬ್ರಿಟಿಶರು ಕೇಳಿದ್ದರು. ಇಜಿಪ್ಶನ್ನರು ಇದನ್ನು ವಿರೋಧಿಸಿದ್ದರು. ಆದರೆ ಕೊನೆಗೆ ಮೂರು ವರ್ಷದ ಅವಧಿಗೆ ಉಭಯತರೂ ಒಪ್ಪಿದ್ದರಂತೆ.

ಮೂರನೆಯದಾಗಿ, ಇಜಿಪ್ತ ಅಥವಾ ಬೇರಾವ ಮಧ್ಯಪೂರ್ವ ರಾಷ್ಟ್ರದ ಮೇಲೆ ಪರಚಕ್ರದ ದಾಳಿಯಾದರೆ ಸಂಯುಕ್ತ ಕ್ರಿಯೆಯನ್ನು ಕೈಕೊಳ್ಳಲು ಉಭಯ ರಾಷ್ಟ್ರಗಳಲ್ಲಿ ಒಡನೆ ಮಾತುಕತೆ ನಡೆಯಬೇಕು, ಎಂಬುದಾಗಿ ಬ್ರಿಟನು ಬೇಡಿತ್ತು. ಈ ಮೂರನೆ ಕಲಮಿಗೆ ಇಜಿಪ್ಶನ್ನರ ತೀವ್ರ ವಿರೋಧವಿತ್ತು. ಇದರಿಂದ ಇಜಿಪ್ತದ ಒಪ್ಪಿಗೆಯಿಲ್ಲದೆ ಜಾವುದೊಂದು ಯುದ್ಧದಲ್ಲಿ ಅದನ್ನು ತೊಡಗಿಸುವದು ಇಂಗ್ಲಂಡಿಗೆ ಸಾಧ್ಯವಾಗುತಿತ್ತು.

### ದಕ್ಷಿಣ ಆಫ್ರಿಕೆಯಲ್ಲಿ

ದಕ್ಷಿಣ ಆಫ್ರಿಕೆಯ ಹಿಂದೀಯರು ಘೆಟ್ಟೋ ಕಾಯಿದೆಯ ವಿರುದ್ಧ ಹೂಡಿದ ಸತ್ಯಾಗ್ರಹದ ಎರಡನೆಯ ಘಟ್ಟವೀಗ ಪ್ರಾರಂಭವಾಗಿದೆ. ಅವರು ಪ್ರತಿಬಂಧಿತ ಪ್ರದೇಶಗಳಲ್ಲಿನ ಆಸ್ತಿಗಳಲ್ಲಿ ಪ್ರವೇಶಮಾಡಲಾರಂಭಿಸಿದ್ದಾರೆ. ಈ ವರೆಗೆ ದರ್ಬಾನ ನಗರ ಸಭೆಯ ಬಯಲಲ್ಲಿ ಪ್ರವೇಶಿಸಿ ಕಾಯಿದೆಯನ್ನು ಅಪ್ರತ್ಯಕ್ಷವಾಗಿ ಮುರಿಯುತ್ತಿದ್ದ ಹಿಂದೀ ಸತ್ಯಾಗ್ರಹಿಗಳು ಈಗ ನೇರವಾಗಿ ಘೆಟ್ಟೋ ಕಾಯಿದೆಯನ್ನು ಮುರಿಯಲಾರಂಭಿಸಿದ್ದಾರೆ. ಜಾರ್ಜ ಸಿಂಗರು ಈ ಸತ್ಯಾಗ್ರಹದ ಮುಂದಾಳಾಗಿದ್ದಾರೆ.

# ಮಹಾದೇವ ದೇಸಾಯರ ಕೊನೆಯ ದಿನಗಳು

( ಮೊದಲನೆ ಪುಟದಿಂದ )

ಕಳಗಿಳಿಸುವದಾಯಿತು. ಮೌಲಾನಾ ಸಾಹೇಬ ಮತ್ತು ಜವಾಹರರೊಡನೆ ನಡೆದ ಸಂಭಾಷಣೆಯೊಂದರಲ್ಲಿ ಉಪವಾಸದ ಮಾತು ಬಂತು. ಅಂತಿಮ ಉಪಾಯವೆಂದು ಅವರು ಪರಿಗ್ರಹಿಸಿದರು. ಅಹಿಂಸೆಗೂ ರಹಸ್ಯಕ್ಕೂ ಏಕೆ ಹೊಂದಿಕೆಯಾಗುವದಿಲ್ಲೆಂದು ಜವಾಹರರು ಒಂದು ಪೂರ್ವಪಕ್ಷವನ್ನೆತ್ತಿದರು. 'ಅಹಿಂಸೆಗೆ ನೀವು ನಿಮಗೆ ಸರಿಹೋಗುವ ಅರ್ಥ ಹಚ್ಚಿಕೊಳ್ಳಬಹುದು' ಎಂದು ಬಾಪೂ ಉತ್ತರವಿತ್ತರು.

"ಚಿಂಚವಡ ನಿಲ್ದಾಣದಲ್ಲಿ ನಮ್ಮನ್ನು ಒಂದು ಮೋಟಾರ ಕಾರಿನಲ್ಲಿ ಕುಳ್ಳಿರಿಸಿದರು. ಉಳಿದವರನ್ನು ಒಂದು ಲಾರಿಯಲ್ಲಿ ತುಂಬಿದರು. ವಿಷಾದ ದುಃಖಗಳು ಬಾಪೂನ ಮುಖದಲ್ಲಿ ನಿಚ್ಚಳವಾಗಿ ಮೂಡಿದ್ದವು. ಮೆಹತಾರನ್ನು ನಡೆಸಿಕೊಂಡ ರೀತಿಯಿಂದ ಅವರ ವೇದನೆ ಇನ್ನಷ್ಟು ತೀವ್ರವಾಗಿತ್ತು. ಮೆಹತಾ ಅವರ ಕೈಕಾಲುಗಳನ್ನು ಹಿಡಿದು ಎತ್ತಿಕೊಂಡು ಹೋದರು. ಒಬ್ಬ ಸಾರ್ಜಂಟನು ಅವರನ್ನು ಲಾರಿಯೊಳಗೆ ತಳ್ಳಿಬಿಟ್ಟನು.

"ಅರಮನೆಯನ್ನು ಮುಟ್ಟಿದ ನಂತರ ನಾನು ಗಾಂಧೀಜಿಯ ವ್ಯೆತಿಕ್ಕಿದೆ. 'ಎಷ್ಟು ವರ್ಷಗಳ ನಂತರ ನೀನು ಇದನ್ನು ಮಾಡುತಿರುವೆ ?' ಎಂದು ಬಾಪೂ ಕೇಳಿದರು. 'ಮಾಲೀಸಿನ' ಸಮಯ ಒಂದೂವರೆ ತಾಸು ಮತ್ತೆ ಮಧ್ಯಾಹ್ನದ ಹೊತ್ತಿಗೆ ಸ್ವಲ್ಪ ಅವರು ನಿದ್ದೆ ಮಾಡಿದರು. ಅ ಮೇಲೆ ಅವರು ವಾಯಿಸರಾಯರಿಗೊಂದು ಪತ್ರ ಬರೆಯತೊಡಗಿದರು. ರಾತ್ರಿ ಅದನ್ನು ನನಗೆ ತೋರಿಸಿದರು. ಅದರೆ ನನ್ನ ಕಣ್ಣು ತೂಕಡಿಸುತಿತ್ತು. ೯—೨೫ ರಷ್ಟು ಹೊತ್ತಿಗೆ ಅವರು ಮೌನವನ್ನು ಕೈಕೊಂಡರು.

## ಆಗಾಖಾನ ಅರಮನೆಯಲ್ಲಿ ಆರು ದಿನ

"೧೦-೮-೪೨. ಪತ್ರದ ಕರಡಿನಲ್ಲಿ ಅನೇಕ ತಿದ್ದುಪಡಿಗಳನ್ನು ಮಾಡಲಾಯಿತು. ಆ ಸಾರ್ಜಂಟನ ವಿಷಯದಲ್ಲಿಯೂ ಪತ್ರಿಕೆಗಳಿಗಾಗಿಯೂ ಇನ್ನೊಂದು ಪತ್ರವನ್ನು ಲಮ್ಲೆಗೆ ಬರೆಯುವದಾಯಿತು. ಆ ಪತ್ರವನ್ನು ಒಮ್ಮೆ, ಎರಡು ಬಾರಿ, ಮೂರುಬಾರಿ ಬದಲಿಸಿ ಬರೆದುದಾಯಿತು. ಮೆಹತಾ ಘಟನೆಯ ಮೇಲೆ ಅತಿರೇಕ ಒತ್ತಡವೀಯಬಾರದೆಂದು ನಾವೆಲ್ಲರೂ ಸೂಚಿಸಿದೆವು.

"ಸಿವಿಲ ಸರ್ಜನರು ಬಂದರು. ಬಾಪೂ ಅವರ ರಕ್ತದ ಒತ್ತಡ ೧೬೨/೯೮ ರಲ್ಲಿಯೂ ಭಾರ ೧೦೪ ಪೌಂಡುಗಳಲ್ಲಿಯೂ ಇದೆ.

"ಲಮ್ಲೆಯವರ ಪತ್ರವನ್ನು ಮರುದಿನವೇ ಟಪಾಲಿಗೆ ಹಾಕಬೇಕೆಂದು ನಾನು ಸೂಚಿಸಿದೆ. ಮತ್ತೊಂದು ಪತ್ರವನ್ನು ಇನ್ನಷ್ಟು ವಿಚಾರ ಮಾಡುವ ಗೋಸುಗ ತಡೆ ಹಿಡಿಯಬೇಕೆಂದು ನಿರ್ಣಯಿಸಲಾಯಿತು.

"ಅದು ಸತ್ಯಾಗ್ರಹ ಮಾಡಿದೆ. ಈ ಪರಿಸ್ಥಿತಿಯಲ್ಲಿ ಅದರ ಹಾಲನ್ನು ತೆಗೆದುಕೊಳ್ಳುವದು ನ್ಯಾಯವಲ್ಲೆಂದು ಬಾಪೂ ಹೇಳಿದರು. ಅವರನ್ನು ಮನವೊಲಿಸಬೇಕಾದರೆ ಮೀರಾಬೆನ್ನಳಿಗೆ ಸ್ವಲ್ಪ ಕಠಿನಹೋಯಿತು.

"೧೧-೮-೪೨ ಪತ್ರವನ್ನು ತಿದ್ದುತಿರುವಾಗ ಬಾ ಮತ್ತು ಸುಶೀಲಾ ಬಂದು ತಲಪಿದರು. ಅವರು ಸುದ್ದಿಯ ಮೂಟೆಯನ್ನೆ ತಂದರು. ದಿನವಿಡೀ ನಾವು ಹೊರಗೆ ಸಂಭವಿಸುತಿದ್ದ ಘಟನೆಗಳನ್ನು ಕುರಿತು ಮಾತಾಡಿದೆವು. ಲಮ್ಲೆಯ ಪತ್ರವನ್ನು ಸಂಜೆ ಟಪಾಲಿಗೆ ಹಾಕಿದ್ದಾಯಿತು. ರಾತ್ರಿಯಲ್ಲಿ ಬಾಪೂ ಅವರು ಜೋನ್ಸ, ಡಲಝೀಲ ಮೊದಲಾದವರ ಸಂಗಡ ತಮಗಾದ ಅನುಭವಗಳನ್ನು ಬಣ್ಣಿಸಿದರು. ನಾನು ಕರ್ನಲ ಶಹಾ ಅವರೊಡನೆ ತುಸು ಸಂಭಾಷಿಸಿದೆ.

"೧೨—೮—೪೨ ವಾಯಿಸರಾಯರ ಪತ್ರದಲ್ಲಿ ಅನೇಕ ಬದಲಾವಣೆಗಳನ್ನು ಮಾಡಿದ ನಂತರ ನಾನು ಅದರ ಸುಂದರ ಪ್ರತಿಯನ್ನು ಸಿದ್ಧಗೊಳಿಸಲು ಸುಶೀಲಾಗೆ ಒಪ್ಪಿಸಿದೆ. 'ಸರಕಾರ ನನಗೆ ಏಳು ವರ್ಷ ಕೊಟ್ಟರೆ ನಾನು ಎಷ್ಟೋ ಕೆಲಸ ಸಾಧಿಸಿ ತೋರಿಸಬಲ್ಲೆ' ಎಂದು ಬಾಪೂ ಹೇಳಿದರು. ನಾನು ಅವರಿಗೆ ಸತ್ಯಮೂರ್ತಿಯವರು ಹೇಳಿದ ಮಾತನ್ನು ನೆನಪು ಮಾಡಿಕೊಟ್ಟೆ: ಬಾಪೂ, ನಿಮ್ಮ ನಿಜವಾದ ಕೆಲಸ ಹಿಂದುಸ್ತಾನಕ್ಕೆ ಸ್ವಾತಂತ್ರ್ಯ ದೊರೆತ ನಂತರ ಅಗತಕ್ಕದ್ದಿದೆ.'

"೧೩-೮-೪೨ ವಾಯಿಸರಾಯರಿಗಾಗಿ ಸುಶೀಲಾ ಸಿದ್ಧಗೊಳಿಸಿದ ಪತ್ರದ ಪ್ರತಿಗೆ ನಾನು ಇನ್ನೂ ಅನೇಕ ತಿದ್ದುಪಡಿಗಳನ್ನು ಗುರುತು ಹಾಕಿದೆ. ಬಾಪೂ ಅದನ್ನು ಪುನಃ ಅದ್ಯಂತವಾಗಿ ಓದಿದರು. ಮೀರಾಬೆನ್ನಳ ಅಭಿಪ್ರಾಯದಂತೆ ಎರಡು ಮೂಲ ವಾಕ್ಯಗಳನ್ನು ಬದಲಿಸಿ ಹೆಚ್ಚು ನಿಚ್ಚಳವಾಗಿ ಮಾಡಲಾಯಿತು. "ಶ್ರೀಮಂತ ವರ್ಗದ ಪ್ರಜಾತಂತ್ರಕ್ಕೂ ಕ್ರಾಂತಿಗೂ ಉದ್ದಿಮೆಗಾರಿಕೆಗೂ ಇರುವ ಚರಮಕಾರಣ ಸಂಬಂಧ (teleological connection)" ಎಂಬಲ್ಲಿ ಚರಮಕಾರಣ (teleology) ಎಂದರೇನೆಂದು ಗಾಂಧೀಜಿ ಕೇಳಿದರು. ಇದು ಚರಮಕಾರಣದ ಬಗೆಗೆ ದೊಡ್ಡ ವಿವಾದಕ್ಕೆ ಎಡೆ ಕೊಟ್ಟಿತು. ಕೊನೆಗೆ ಬಾಪು ಹೇಳಿದ್ದು: 'ಬಿಡಿಸಿ [illegible]ಬೇಕಾದರೆ ಅದರ ಅರ್ಥ ಸುತ್ತು ಸುತ್ತಾಗಿ ವಾ[illegible]ವದು ಎಂದು ಅಲ್ಲವೆ?' ಮುಂದೆ reek ಶಬ್ದ ಮುಂದೆ with ಶಬ್ದ ಉಪಯೋಗಿಸಬೇಕೋ of ಉಪಯೋಗಿಸಬೇಕೋ ಎಂಬ ಬಗೆಗೆ ಚರ್ಚೆ ನಡೆಯಿತು Varicose veins (ಉಬ್ಬಿದ ರಕ್ತನಾಳ -ಒಂದು ರೋಗ) ಎಂಬಲ್ಲಿ varicose ಶಬ್ದದ ವ್ಯುತ್ಪತ್ತಿಯನ್ನು ಸುಶೀಲಾಳಿಂದ ಕೇಳಿದರು. L ಮತ್ತು L ಇವರಿಗೆ (ಲಾರ್ಡ ಲಮ್ಲೆ ಮತ್ತು ಲಾರ್ಡ ಲಿನಲಿಥಗೋ) ಆ ಎರಡು ಪತ್ರಗಳನ್ನು ವಿಳಾಸ ಬರೆದು ಕಳಿಸಲಾಯಿತು. ಈ ಎರಡು L ಗಳ ಹಿಂದೆ H E ಎಂಬುದಿಷ್ಟೆ ಬೇಕಾಗಿದೆ(ಅಂದರೆ HELL ಅರ್ಥಾತ್ ನರಕ ಎಂದು) ಎಂದು ಶ್ರೀಮತಿ ನಾಯುಡು ಅವರು ಚಾಟೂಕ್ತಿಯನ್ನು ಆಡಿದರು.

"ಬಾ ಅವರಿಗಾಗಿ ಸುಶೀಲಾ ಒಂದು ಅನುಪಾನ ಬರೆದಳು. ಸುಪರಿಂಟೆಂಡೆಂಟನು ಅದನ್ನು ಔಷಧ ದಂಗಡಿಗೆ ಕಳಿಸುವದರಲ್ಲಿದ್ದನು. ನಾನು ಬಾಪೂಗೆ ಹೇಳಿದೆ: 'ಅವನು ಅನುಪಾನವನ್ನು ಬಾ ಅವರ ಹೆಸರಿನೊಂದಿಗೆ ಕಳಿಸುತಿದ್ದಾನೆ. ಇದರಿಂದ ಬಾ ಇಲ್ಲಿರುವರೆಂದೂ ಅವರಿಗೆ ಜಡ್ಡಾಗಿದೆಯೆಂದೂ ಹೊರಗೆ ಸುದ್ದಿ ಕಳಿಸಿದಂತೆಯೆ ಸರಿ.' ಬಾಪು ಹೇಳಿದರು: 'ನೀನು ಸುಪರಿಂಟೆಂಡೆಂಟನನ್ನು ಎಚ್ಚರಿಸು. ಬೇಕಾದರೆ ಅವನು ಹೆಸರುಗಳನ್ನು ಹೊಡೆದು ಹಾಕಲಿ.' ಈ ಸೂಚನೆಗಾಗಿ ಸುಪರಿಂಟೆಂಡೆಂಟನು ಬಹಳ ಕೃತಜ್ಞನಾದನು. ಹೆಸರುಗಳನ್ನು ಹೊಡೆದುಹಾಕಿ ಅವನು ಅನುಪಾನಗಳನ್ನು ಔಷಧದಂಗಡಿಗೆ ಕಳಿಸಿದನು.

"ಹರಮುರುಕು ಕಂತಿಗಳಿಂದ ನಾನೊಂದು ಟೋಸ್ಟು ಮಾಡುವ [illegible] ಹಂಚು ಸಿದ್ಧಗೊಳಿಸಿದೆ. ಬಾಪೂ Necessity is the mother of invention' (ಅವಶ್ಯಕತೆಯೇ ಸಂಶೋಧನದ ಮೂಲ) ಇದಕ್ಕೆ ಗುಜರಾಥಿ ಸಮಾನ ವಾಕ್ಯವಾವುದೆಂದು ಕೇಳಿದರು, ನಾನು ಸೂಚಿಸಿದೆ: 'ಗರಜ ಯೇ ಶೋಧನೀ ಜನೇತಾ ಛೇ'

"೧೪-೮-೪೨. ವಾಯಿಸರಾಯರ ಪತ್ರವನ್ನು ಟಪಾಲಿಗೆ ಹಾಕಿದ್ದೇವೆ.

"ಇಂದು ನಾವು ಸರದಾರರ ಮತ್ತು ಪ್ಯಾರೇಲಾಲನ ಬಗೆಗೆ ಸುದ್ದಿಯಿದೆಯೇ ಎಂದು ಕೇಳಿದೆವು. ಸರದಾರರ ಬಗ್ಗೆ ವರದಿಯಿಲ್ಲ. ಅದರಿಂದ ಅವರು ಸೌಖ್ಯವಾಗಿದ್ದಾರೆಂದು ತಿಳಿದುಕೊಳ್ಳಬೇಕು. ಪ್ಯಾರೇಲಾಲನು ಪುಣೆಯಲ್ಲಿರುವನೊ ಇಲ್ಲವೊ ಗೊತ್ತಿಲ್ಲ ಎಂಬದಾಗಿ ಉತ್ತರ ಬಂತು."

## ಯಾತ್ರೆಯ ಕೊನೆ

ಇಲ್ಲಿ ಈ ದಿನಚರಿ ಒಮ್ಮಿಂದೊಮ್ಮೆ ನಿಂತು ಹೋಗಿ ಮೂವತ್ತು ವರ್ಷಗಳ ಏಕಾಗ್ರ, ಅವಿರತ ಪರಿಶ್ರಮವನ್ನು ಒಮ್ಮೆಗೇ ಮುಕ್ತಾಯಗೊಳಿಸಿಬಿಟ್ಟಿದೆ. ಅವರ ಜೀವನದ ಹಣತೆ ತಾ. ೧೫ ಮುಂಜಾನೆ ನಂದಿಹೋಯಿತು. ಮಹಾದೇವರಂತೆ ತಮ್ಮ ಜೀವನದ ದಿನದಿನದ, ತಾಸುತಾಸಿನ ಘಟನೆಗಳ ದಿನಚರಿಯನ್ನು ಇಡುವ ನಿಯಮವನ್ನಿಟ್ಟಿದ್ದ ನನ್ನ ಪರಿಚಯದ ಇನ್ನೊಬ್ಬರು ಮನುಷ್ಯರೆಂದರೆ ದಿವಂಗತ ಜಮುನಾಲಾಲ ಬಜಾಜರು ಮಾತ್ರ. ಅವರ ದಿನಚರಿಯು ಕೊನೆಯ ಲಿಖಿತ ಅವರು ವರ್ಧಾದಲ್ಲಿರುವ ತಮ್ಮ ಸೊಸೆಯ ಮನೆಗೆ ಹೊರಡುವಾಗ ಮಾಡಲ್ಪಟ್ಟಿತ್ತು. ಅಲ್ಲಿಂದ ಅವರು ಮರಳಲಿಲ್ಲ.

ನನ್ನನ್ನು ಅಗಾಖಾನ ಅರಮನೆಗೆ ಒಯ್ದಾಗ ಮಹಾದೇವರ ಮರಣವಾಗಿ ಸರಿಯಾಗಿ ಒಂದು ತಿಂಗಳಾಗಿತ್ತು. ಅವರು ಬಿಟ್ಟುಹೋಗಿದ್ದ ಕಾಗದ ಪತ್ರಗಳಲ್ಲಿ ದಿನಚರಿಯಲ್ಲದೆ ತಾ. ೫ನೆ ದಿನ ತಾಲಿಮಿ ಸಂಘದ ಅಧ್ಯಾಪಕ ಶಿಬಿರದಲ್ಲಿ ಸೇವಾಗ್ರಾಮದಲ್ಲಿ ಗಾಂಧೀಜಿ ಮಾಡಿದ ಕೊನೆಯ ಸಾರ್ವಜನಿಕ ಭಾಷಣದ ವರದಿಯೊಂದು ಇತ್ತು. ಮುಂಬಯಿಯಲ್ಲಿ ಅ. ಭಾ. ಕಾಂ. ಸಭೆ ನಡೆದಿರುವಾಗ ಅದನ್ನು ಸಿದ್ಧಗೊಳಿಸಲು ಅವರಿಗೆ ಅವಕಾಶವಾಗಿರಲಿಲ್ಲ. ಆದುದರಿಂದ ಆಗಾಖಾನ ಅರಮನೆಗೆ ಬಂದಮೇಲೆ ಅವಕಾಶವಾದ ತಕ್ಷಣ ಅದನ್ನು ಮಾಡಿಟ್ಟಿದ್ದರು.

ಇನ್ನುಳಿದುವು ಬಾಪುವಿನ ಅ. ಭಾ. ಕಾಂ. ಭಾಷಣಗಳು "ಬಾಪೂವಿನ ೭ನೆ ತಾರೀಕಿನ ಅ. ಭಾ. ಕಾಂ. ಭಾಷಣವನ್ನು ಸಿದ್ಧಗೊಳಿಸಿದ್ದೀಯಾ?" ಎಂದು ಅವರು ಅಗಸ್ಟ ೯ ಮುಂಜಾನೆ ಬಂಧನಕ್ಕಿಂತ ತುಸು ಮುಂಚೆ ನನ್ನನ್ನು ಕೇಳಿದ್ದರು. "ನಾನಿನ್ನು ಅರ್ಧದಲ್ಲಿಯೇ ಇದ್ದೇನೆ" ಎಂದು ನಾನು ಉತ್ತರಿಸಿದ್ದೆ. "ನೀವೊ?" ಎಂದು ಅವರು ಮಾಡಬೇಕಾಗಿದ್ದ ಭಾಷಣ ವರದಿಯನ್ನು ನೆನೆಸಿಕೊಂಡು ಕೇಳಿದೆ. "ರಾತ್ರಿ ಎರಡು ಗಂಟೆಯವರೆಗೆ ಬರುತ್ತಲೇ ಇದ್ದ ಟೆಲಿಫೋನ ಕರೆಗಳ ಪೀಡೆಯಿಂದ ನನಗೆ ಅದನ್ನು ಮುಟ್ಟುವದು ಕೂಡ ಸಾಧ್ಯವಾಗಿಲ್ಲ" ಎಂದು ಉತ್ತರ ಕೊಟ್ಟು ಆ ಭಾಷಣದ ಟಿಪ್ಪಣಿಗಳಿದ್ದ ಟಿಪ್ಪಣಿ ಪುಸ್ತಕವನ್ನು ನನ್ನ ಕೈಯಲ್ಲಿ ತುರುಕಿ ಬಂಧನದ ವಾರಂಟುಗಳನ್ನು ಹಿಡಿದುಕೊಂಡು ಬಂದಿದ್ದ ಪೋಲೀಸ ಕಮೀಶನರರನ್ನು ಭೆಟ್ಟಿಯಾಗಲು ಗಾಂಧಿಜಿಯ ಕೋಣೆಯಿಂದ ಹೊರಬಂದರು. ಆದರೆ ಅವರು ಅತ್ಯಲ್ಪ ಋಣವನ್ನಾದರೂ ಹಿಂದುಳಿಸಿ ಹೋಗಲು ಒಪ್ಪುವ ಪ್ರಾಣಿಯಲ್ಲ. ಅದರಿಂದ ಅಗಾಖಾನ ಅರಮನೆಯಲ್ಲಿ ತಮ್ಮ ಉಳಿದ ಆರು ದಿನಗಳಲ್ಲಿ ಅಗಸ್ಟ ೭, ೮ ರ ಗಾಂಧೀಜಿಯ ಭಾಷಣಗಳನ್ನು ನೆನಪು ಮಾಡಿಕೊಂಡು ಸಾರಾಂಶವನು ಸಿದ್ಧಗೊಳಿಸಿಟ್ಟಿದ್ದರು. ಅದಕ್ಕಿಂತ ಉತ್ತಮ ಸಾರಾಂಶವನ್ನು ನಾನಿನ್ನೂ ಕಂಡಿಲ್ಲ.

ಗಾಂಧೀಜಿಯೊಡನೆ ಅವರ ಸಹವಾಸ ಅವರ ಪಾಲಿಗೆ ಜೀವನದಲ್ಲಿ ಒಂದು ಬಗೆಯ ತರಬೇತಿ, ಶಿಸ್ತು ಎನಿಸಿತ್ತು. ಗಾಂಧೀಜಿಯವರು ಬಹಳ ಆಳವಾದ ಪರೇಂಗಿತಜ್ಞತೆಯಿಂದ ನುಡಿದಂತೆ ಮಹಾದೇವರ ಆತ್ಮ ಹಾತೊರೆಯುತಿದ್ದುದು ಭಕ್ತಿಭಾವದ ವಿಷಯಕ್ಕಾಗಿ "ಆ ನೀರಡಿಕೆಯಿಂದಲೆ ಅವನು ನನ್ನ ಬಳಿಗೆ ಬಂದರು (ಎನ್ನಲೆ?). ಯೌವನದ ಉಚ್ಚ ಘಟ್ಟದಲ್ಲೆ ಅವನು ನನ್ನನ್ನು ತೊರೆದು.... ತನ್ನ ಸೃಷ್ಟಿಕರ್ತನ ವಕ್ಷದಲ್ಲಿ ಸಾಯುಜ್ಯವನ್ನು ಪಡೆಯಲು ಹೊರಟುಹೋದನು"

"ತೆರಪಿರದೆ ತಡೆಯಿರದೆ ಬೆಳೆಯಲೆಂದೇ ಇವನ
ಜನುಮ: ಬೇಕಿತ್ತೊಂದು ನೆರವವಗೆ ನಿನ್ನ ಇಂ-
ದವನು ಬೆಳೆದಿಹನೊಂದು ಮುಷ್ಟಿ,
ಇನ್ನವನಿಗದು
ಬೇಡ, ತೆಗೆದದನು ಹೊಸ ನೆರವುಗಳ
ನೀಡುವದು
ಸೊಸ ಭಾರಗಳ ಹೊರಲು; ಏರೇರಿದಂತೆ ಹೊಸ
ದಿನ್ನೆಗಳು ಕಾಣುವವು ಮನುಜಂಗೆ,
ಅವನೆಲ್ಲವನು
ಏರಿ ತೀರಿಸಬೇಕು.

* * *

ಈ ಪರಿಶ್ರಮದಲ್ಲಿ, ಬಳಸಿರುವ ಕೆಳ್ಳನ್ನ
ಗಾಳಿಯನೆ ಹಿಡಿದು ಗಟ್ಟಿಯ ಮಾಡಿ ತನಗೆ
ಅನು-
ಕೂಲಗೊಳಿಸುವ ಬಗೆಯಲಿಹುದು ಉತ್ಕರ್ಷ,
ಮನುಜಗೊಬ್ಬಗೆ ಮಾತ್ರ ದೊರೆಕೊಂಡ
ಪ್ರಗತಿಪಥ-
ಪರಮಾತ್ಮಗಿಲ್ಲ ಆ ದಾರಿ, ಪಶುಗಳಿಗಿಲ್ಲ;
ದೇವನಿದ್ದಂತಿಹನು- ಇರುವ; ಇದ್ದಂತಹವು
ಇರಲಿಹವು ಪಶು;ಮನುಜನೋ ಇಹುದು ಅಂಡ,
ಅಗಲು ಬಯಸುತಿಹುದೊ ಬ್ರಹ್ಮಾಂಡ.



ಜಗತ್ತಿನ ಅತಿ ಉದ್ದವಾದ ಸೇತುವೆ ಈ ಸೇತುವೆಯು ಕ್ಯಾಲಿಫೋರ್ನಿಯಾ (ಅಮೇರಿಕೆ) ದಲ್ಲಿದೆ. ಇದು ಸ್ಯಾನಫ್ರಾನ್ಸಿಸ್ಕೊದಿಂದ ಓಕಲಂಡ ದ್ವೀಪದ ವರೆಗೆ ಅಂದರೆ ೮। ಮೈಲು ಉದ್ದವಿದೆ. ಇದನ್ನು ೧೯೩೬ ರಲ್ಲಿ ರಚಿಸಲಾಯಿತು.



ಕರ್ಮವೀರ
ಹರಿಜನ ಪುರವಣಿ

# ಹಿಂಸೆಯಿಂದೇನು ?

ಪತ್ರಿಕೆಗಳ ವರದಿಗಳನ್ನು ನಂಬಬಹುದಾಗಿದ್ದರೆ, ಸಿಂಧದ ಹೊಣೆಗಾರ ಮಂತ್ರಿಗಳೂ ದೇಶದ ಬೇರೆ ಎಲ್ಲ ಭಾಗಗಳ ಅವರಷ್ಟೆ ಹೊಣೆಗಾರರಾದ ಲೀಗ ಮುಂದಾಳುಗಳೂ ಬಿಚ್ಚು ಮಾತಿನಲ್ಲಿ ಹಿಂಸೆಯನ್ನು ಬೋಧಿಸುತ್ತಿದ್ದಾರೆ. ಕಾಹಳದೊಡನೆ ಹೋಲಿಸಿದರೆ ಬಿಚ್ಚು ಮಾತೇ ಗುಣ. ಅದರೆ ಅಶ್ಲೀಲತೆಯಿಂದ ತುಂಬಿದ್ದರೆ, ಅಮ ಲೀಗ ಅನುಯಾಯಿಯಲ್ಲಿರಲಿ ಬೇರಾವನಲ್ಲಿರಲಿ, ಘೋರ ದುರ್ಗುಣವೇ ಸರಿ. ಲೀಗಿನಲ್ಲಿಲ್ಲದ ಯಾವನೇ ಮುಸ್ಲಿಮನು ದ್ರೋಹಿ ಎನ್ನುವನೊಬ್ಬ, ಹಿಂದುಗಳು ಕಾಫರರು, ಕಾಫರರಿಗೆ ತಕ್ಕ ಶಾಸ್ತಿ ಅವರಿಗಾಗಿ ಬೇಕು ಎನ್ನುವನು ಬೇರೊಬ್ಬ.

ಪ್ರತ್ಯಕ್ಷ ಹೋರಾಟವೆಂದರೇನು, ಅದು ಹೇಗೆ ಸಾಗುವದು ಎಂಬುದಕ್ಕೆ ಪ್ರತ್ಯಕ್ಷ ನಿದರ್ಶನ ಕಲಕತ್ತೆ.

ಇದರಿಂದ ಲಾಭ ಯಾರಿಗೆ? ಮುಸ್ಲಿಂ ಜನಸಾಮಾನ್ಯಕ್ಕೂ ಅಲ್ಲ. ಇಸ್ಲಾಮದ ವಿವೇಕ ಶೀಲ ಅನುಯಾಯಿಗೂ ಅಲ್ಲ "ಇಸ್ಲಾಮ" ಶಬ್ದಕ್ಕೆ ವಿವೇಕ ಮತ್ತು ಶಾಂತಿ ಎಂದರ್ಥ "ಇಸ್ಲಾಮ ಅಲೇಕುಮ್" ಎಂಬ ಆಶೀರ್ವಚನವೇ ನಿನಗೆ 'ಶಾಂತಿಯಾಗಲಿ" ಎಂಬ ಅರ್ಥಗರ್ಭಿತವಾಗಿದೆ

ಹಿಂಸೆಗೂ ಜೀವನದಲ್ಲೊಂದು ಸ್ಥಾನವಿರಬಹುದು. ಅದರೆ ಪತ್ರಿಕೆಗಳ ವರದಿ ನಿಜವೆಂದು ಹಿಡಿದರೆ ಕಲಕತ್ತೆಯಲ್ಲಿ ಪ್ರದರ್ಶಿಸಲ್ಪಟ್ಟಿದ್ದು ಆ ಬಗೆಯದಲ್ಲ. ಯಾವದೇ ರೂಪ - ರಂಗಿನ ಪಾಕಿಸ್ತಾನವಾದರೂ ಅದರ ಸಂಪಾದನೆಯ ಮಾರ್ಗ ಮತಿಗೇಡಿ ಹಿಂಸೆಯಲ್ಲಿಲ್ಲ. ಮತಿಗೇಡಿ ಹಿಂಸೆಯೆಂದು ನಾನು ಬರೆಯುತಿರುವಾಗ ಮತಿಯುಳ್ಳ ಹಿಂಸೆಯೆಂಬುದೊಂದು ಅದು ಏನೇ ಇರಲಿ ಇರಬಲ್ಲದೆಂದು ಹಿಡಿದಿದ್ದೇನೆ. ಕಲಕತ್ತೆಯ ಪ್ರದರ್ಶನ ಅಂಥ ಹಿಂಸೆಯ ನಿದರ್ಶನವಾಗಿದ್ದಿಲ್ಲ

ಮತಿಹೀನ ಹಿಂಸೆಯಿಂದಾಗಬಹುದಾದುದೊಂದೆ. ಅದು ಬ್ರಿಟಿಶ ಅಥವಾ ವಿದೇಶ ಆಳಿಕೆಗೆ ಇನ್ನಷ್ಟು ಆಯುಷ್ಯವನ್ನು ದಯಪಾಲಿಸುತ್ತದೆ ಬ್ರಿಟಿಶ ಮಂತ್ರಿ ರಾಯಭಾರಿಗಳು ಹೊರಡಿಸಿದ ಸರಕಾರಿ ಪತ್ರದ ನಿರ್ಮಾತೃಗಳು ಹಿಂದೀ ಪ್ರತಿನಿಧಿಗಳ ಕೈಗೆ ಅಧಿಕಾರವನ್ನು ಶಾಂತರೀತಿಯಿಂದ ವರ್ಗಾಯಿಸಬೇಕೆಂದು ಬಯಸುತ್ತಾರೆಂದು ನನ್ನ ನಂಬಿಕೆ. ಅದರೆ ಬ್ರಿಟಿಶ ಬಂದೂಕು ತುಪಾಕಿಗಳ ಸಹಾಯ ನಮಗೇ ಬೇಕಾಗಿದ್ದರೆ ಅವರು ಹೊರಟು ಹೋಗಲಾರರು; ಒಂದು ವೇಳೆ ಹೋದರೂ ಇನ್ನಾವುದಾದರೊಂದು ವಿದೇಶಿ ರಾಷ್ಟ್ರ ಅದರ ಸ್ಥಾನವನ್ನು ಆಕ್ರಮಿಸುವದು. ಬ್ರಿಟಿಶ ಬಂದೂಕುಗಳನ್ನು ಉಪಯೋಗಿಸುವ ಪ್ರಸಂಗ ಬಂದಾಗಲೆಲ್ಲ ನಾವು ವೈರಿ ಹಸ್ತಕರನ್ನು ಬೈಯುತ್ತ ಹೋದರೆ ನಾವು ಬಹಳ ದೊಡ್ಡ ತಪ್ಪು ಮಾಡುತ್ತಿದ್ದೇವೆ- ವೈರಿಹಸ್ತಕರೇನೋ ಕೆಲಸ ಮಾಡುತ್ತಲೇ ಇದ್ದಾರೆ. ಇದರಲ್ಲಿ ಸಂಶಯವಿಲ್ಲ. ಅದರೆ ಅ ಕುದುರೆಯ ಮೇಲೆ ಕೆಳಗೆ ಬೀಳುವವರೆಗೂ ಸವಾರಿ ಮಾಡೋಣ ಬೇಡ.

ಈಚೆಗೆ ಕಲಕತ್ತೆ ದುಷ್ಕೀರ್ತಿಯನ್ನು ಸಂಪಾದಿಸಿದೆ. ಕಳೆದ ಕೆಲ ತಿಂಗಳುಗಳಲ್ಲಿ ಅದು ಕಂಡ ಉನ್ಮತ್ತ ಪ್ರದರ್ಶನಗಳು ಒಂದೆರಡಲ್ಲ. ಈ ಕೆಟ್ಟ ಹೆಸರನ್ನು ಇನ್ನೂ ಕೆಲಕಾಲದ ವರೆಗೆ ಉಳಿಸಿಕೊಂಡರೆ ಕಲಕತ್ತೆ ಭವನಗಳ ನಗರವಾಗಿರುವದು ಹೋಗಿ ಮಸಣಗಳ ನಗರವಾಗದಿರದು.

ಕಲಕತ್ತೆಯ ಹಿಂಸಾಕಾಂಡ ಶಾಂತವಾಗಲಿ, ಅದು ಎಲ್ಲೆಡೆಗೆ ಹಿಂಸೆಯ ಹಬ್ಬುಗೆಯ ಸಂಕೇತವಾಗದಿರಲಿ. ಇದು ಮುಸ್ಲಿಂ ಲೀಗಿನ ಮುಂದಾಳುಗಳನ್ನೇ ಹೊಂದಿಕೊಂಡಿದೆ ನಿಜ; ಅದರೆ ಉಳಿದವರು ಕೂಡ ಹೊಣೆಯಿಂದ ಮುಕ್ತರಾಗಲಾರರು. ಅವರು ಪ್ರತಿ ಹಿಂಸೆಯನ್ನು ಕೈಕೊಳ್ಳಬಹುದು. ಇಲ್ಲವೆ ತಾಳಿಕೊಳ್ಳಬಹುದು. ತಾಳಿಕೊಳ್ಳುವದು ಸುಲಭ - ಇಚ್ಛೆಯೊಂದಿದ್ದರೆ ಪ್ರತಿ ಹಿಂಸೆ ತೊಡಕುಗಳಿಂದ ತುಂಬಿದ ಹಾದಿ "ಶಠಂ ಪ್ರತಿ ಶಾಠ್ಯಂ" ಎಂಬುದೇ ಮೇಲ್ಗೈಯಾಗುವದೋ ಹಲವನ್ನು ಎದುರಿಸಲು "ಏಕಂ ಪ್ರತಿ ಬಹು' ಎಂಬುದೋ?

ಸೇವಾಗ್ರಾಮ ಮೋ. ಕ. ಗಾಂಧಿ
ತಾ॥೧೯-೮-೪೬

# ಖಾದಿಯ ಪರೀಕ್ಷಾ ಕಾಲ

ಕಳೆದ ೨೫ ವರುಷಗಳ ತನ್ನ ಇತಿಹಾಸದಲ್ಲಿ ಖಾದಿಯು ಬೇರೆ ಬೇರೆ ಘಟ್ಟಗಳನ್ನು ದಾಟುತ್ತ ಬಂದಿದೆ. ಪ್ರಾಚೀನ ಅಲಭ್ಯ ಸ್ಥಿತಿಯಿಂದ ಖಾದಿಯಿಂದು ಹಿಂದುಸ್ತಾನಸ್ವಾತಂತ್ರ್ಯಕ್ಕಾಗಿ ಹೂಡಿದ ಅಹಿಂಸಾತ್ಮಕ ಹೋರಾಟದ ಪ್ರತೀಕವಾಗಿದೆ. [illegible] ಪಂಡಿತ ಜವಾಹರಲಾಲರ ಮಾತಿನಲ್ಲಿ ಹೇಳುವುದಾದರೆ ಅದಿಂದು ನಮ್ಮ 'ಸ್ವಾತಂತ್ರ್ಯದ ಪರಿವೇಷ' ವಾಗಿದೆ. ಪ್ರಚಂಡ ಉತ್ಪಾದಕರ ಮತ್ತು ವಿನಿಯೋಜಕರ ಸಹಕಾರದ ತಳಹದಿ ಅದಾಗಿದೆ. ಅದರೆ ಇಷ್ಟೇ ಸಾಲದು. ಕಾಲಮಾನ ಪರಿಸ್ಥಿತಿಯು ಎಲ್ಲ ಹೊಡೆತಗಳನ್ನೆದುರಿಸಲು ಸಮರ್ಥವಾಗಿ ಅಹಿಂಸಾತ್ಮಕ ಸಾಮಾಜಿಕ ತಳಹದಿಯನ್ನು ಖಾದಿ ಹಾಕಬೇಕಾಗಿದ್ದರೆ ಅರ್ಥಾತ್ ಯಾವ ಉದ್ದೇಶವನ್ನು ಖಾದಿಯು ಸಾಧಿಸಬೇಕೆಂದು ಬಗೆಯಲಾಗಿದೆಯೊ ಅದು ಸಾಧಿಸಬೇಕಾದರೆ ಅದರ ತಳಹದಿಯನ್ನು ಪುನರ್ವಿಮರ್ಶಿಸಿ ಪರಿವರ್ತಿಸಬೇಕಾಗಿದೆ. ಗಾಂಧೀಜಿಯವರು ಸ್ಥಾನಬದ್ಧತೆಯಿಂದ ಬಿಡುಗಡೆ ಹೊಂದಿಬಂದ ನಂತರ ಅವರ ನೇತೃತ್ವದಲ್ಲಿ ಅಖಿಲ ಭಾರತ ಚರಖ ಸಂಘವು ಬೇರೆ ಬೇರೆ ಗೊತ್ತುವಳಿಗಳನ್ನು ಸ್ವೀಕರಿಸಿ ಇದನ್ನು ಮಾಡಲಾಯಿತು. ಖಾದಿಯೊಂದು ವ್ಯಾಪಾರದವಸ್ತುವೆಂದು ತಿಳಿದು ಕೊಡಲಾಗುತ್ತಿದ್ದ ಮಹತ್ವವನ್ನು ಕಡಮೆ ಮಾಡಿ ಅದರ ಸ್ವಾವಲಂಬನ ಘಟ್ಟಕ್ಕೆ ಹೆಚ್ಚುಜೋರು ಕೊಡಲಾಯಿತು. ಕೊಕ್ಕ ತೆಗೆದುಕೊಂಡು ಖಾದೀ ಮಾರುವ ಕೇಂದ್ರಗಳು ಖಾದೀ ಭಾಂಡಾರಗಳಾಗದೆ ಖಾದೀ ಉತ್ಪಾದನೆಯ ಬೇರೆ ಬೇರೆ ವಿಧಾನಗಳನ್ನು ಕಲಿಸುವ ಕೇಂದ್ರಗಳಾದವು. ಕೆಲ ಅಂಶ, ನೂಲು ತೆಗೆದುಕೊಂಡು ಖಾದಿಯನ್ನು ಮಾರಬೇಕೆಂಬ ನಿಯಮ ಜಾರಿಯಲ್ಲಿ ಬಂತು. ಮತ್ತು ಈ ಪ್ರಮಾಣವು ಸಾವಕಾಶವಾಗಿ ಏರುತ್ತ ನಡೆದದೆ. ಈ ಬದಲಾವಣೆಗಳನ್ನು ಮಾಡುತಿರುವಾಗಲೆ ಈ ಬದಲಾವಣೆಗಳಿಗೆ ಯಾವ ರೀತಿಯಿಂದಲೂ ಸಂಬಂಧವಿಲ್ಲದ ಬೇರೆ ಬೇರೆ ಕಾರಣಗಳ ಸಲುವಾಗಿ ದೇಶದಲ್ಲಿಯ ಖಾದಿ ಉತ್ಪಾದನೆ ಬಹಳ ಕಡಮೆಯಾಯಿತು. ಇದೊಂದು ಬಗೆಯ ಆಶ್ಚರ್ಯಕರಯೋಗಾಯೋಗ. ಖಾದಿಯಲ್ಲ ಡಕವಾದ ಬಂಧನಗಳನ್ನೆಲ್ಲ ಎಂದೂ ಸ್ವೀಕರಿಸದೆ ಕೇವಲ ಉತ್ತೇಜನಕ್ಕಾಗಿಯೆಂದು ಖಾದಿ ಧರಿಸುತಿದ್ದವರಿಗೆ ಬಹಳ ತೊಂದರೆಯಾಗಹತ್ತಿತು. ಖಾದಿಯ ಉತ್ಪಾದನೆಯಲ್ಲಿ ಸಹಕರಿಸದಿದ್ದವರಿಗೆ ಬರಿದು ಬಿದ್ದ ಖಾದೀ ಭಾಂಡಾರಗಳು ಖಾದಿಯನ್ನು ಕೊಡಲಾರದಾದುವು. ಇದು ನ್ಯಾಯ್ಯವೇ ಆಗಿದ್ದಿತು. ಸ್ಥಿತ್ಯಂತರದ ಕಾಲದಲ್ಲಿ ಮತ್ತು ಯುದ್ಧಾನಂತರದ ಅಸಾಮಾನ್ಯ ಪರಿಸ್ಥಿತಿಯಲ್ಲಿ ಉಂಟಾದ ಬದಲಾವಣೆಯಿಂದ ಯಾವುದನ್ನೂ ಯೋಗ್ಯ ರೀತಿಯಿಂದ ಸರಿಪಡಿಸಿಕೊಳ್ಳುವುದಾಗಲಿಲ್ಲ. ಖಾದಿಯ ಬೇಡಿಕೆ ಬಹಳ ಹೆಚ್ಚಿದ್ದು ದಿನಾಲು ಅದು ಇನ್ನೂ ಹೆಚ್ಚುತಿರುವಾಗ ಖಾದೀ ಪೂರೈಕೆಯನ್ನು ನಿರ್ಬಂಧಿಸುವ ನಿಯಮವನ್ನು ಹಾಕಿದ್ದು ನ್ಯಾಯ್ಯವಲ್ಲೆಂದು ಅವರ ಅಭಿಪ್ರಾಯ. ಒಂದು ಬಗೆಯ ಶೂನ್ಯ ಪರಿಸ್ಥಿತಿಯುಂಟಾಗಿದ್ದು ಅದನ್ನು ಸರಿಪಡಿಸುವುದು ದೀರ್ಘಾನುಭವಿ ಮತ್ತು ವ್ಯಾಪಕ ಅ. ಭಾ. ಚರಕ ಸಂಘದ ಕರ್ತವ್ಯವಾಗಿದೆ. ಅದರೆ ಚರಖ ಸಂಘವು ಅದನ್ನು ಮಾಡುವುದನ್ನು ಬಿಟ್ಟುಗೊಟ್ಟು ಅಡ್ಡಹಾದಿಯನ್ನು ಹಿಡಿದಿದೆ. ಅದರಿಂದ ಅತ್ಯಂತ ನಿಷ್ಠ ಮತ್ತು ಎಂದಿನಿಂದಲೂ ಖಾದೀಧಾರಿಗಳಾಗಿದ್ದವರಿಗೆ ಸ್ವತಃ ನೂಲದಿದ್ದರೆ ಖಾದಿ ಸಿಕ್ಕದಂತಹ ಪರಿಸ್ಥಿತಿ ಪ್ರಾಪ್ತವಾಗಿದೆ. ಅನೇಕ ಕಾರ್ಯಕರ್ತರಿಗೆ ತಮ್ಮ ಕೆಲಸ ಮಾಡುವಾಗ ನೂಲು ತೆಗೆಯುವುದು ಅಶಕ್ಯವಾಗಿದೆ. ಅ. ಭಾ. ಚರಕ ಸಂಘದವರ ಈ ಹೊಸ ಧೋರಣದ ಅಯಶಸ್ಸಿನ ದ್ಯೋತಕವಲ್ಲವೇ ಇದು? ಎಂದು ಅವನು ಕೇಳುತ್ತಾನೆ.

## ಹೊಸ ಮಾರ್ಪಾಟು ಅಯಶಸ್ವಿಯೇ?

"ಗಾಂಧೀಜಿ ಇಂತು ವಿವರಿಸಿರುತ್ತಾರೆ:—

"ಅ.ಭಾ.ಚ. ಸಂಘದ ಸದ್ಯದ ಧೋರಣವನ್ನು ಸಂಪೂರ್ಣವಾಗಿ ಅರಗಿಸಿಕೊಳ್ಳಬೇಕಾದರೆ ಅದರ ನಿದಾನ ಶಾಸ್ತ್ರವನ್ನೇ ನೀವು ಅಭ್ಯಸಿಸಬೇಕು. ಪ್ರಾರಂಭಾವಸ್ಥೆಯಲ್ಲಿ ಕೇವಲ ಬಡವರಿಗೆ ಪರಿಹಾರ ಕೊಡುವುದರ ಮೇಲೆಯೆ ಹೆಚ್ಚು ಜೋರು ಕೊಡಲಾಯಿತು. ಅದರೆ ಇದನ್ನು ಸಾಧಿಸುವಾಗಲೆ ಉಚ್ಚ ವರ್ಗದವರಲ್ಲಿ ಮತ್ತು ಕೆಳಗಿನ ವರ್ಗದವರಲ್ಲಿ ಒಂದು ಬಗೆಯ ಸಜೀವ ಸಂಬಂಧವುಂಟಾಯಿತು ಮತ್ತು ರಾಜಕೀಯ ಮಹತ್ವವೂ ಪ್ರಾಪ್ತವಾಯಿತು. ಅದು 'ಸ್ವಾತಂತ್ರ್ಯದ ಪರಿವೇಷ' ವಾಯಿತು. ಆ ಮಾರ್ಗದಿಂದ ಪ್ರಗತಿ ಅಶಕ್ಯವಾಯಿತು. ಉದಾಹರಣಾರ್ಥವಾಗಿ ನಾವು ಕೂಲಿಯನ್ನು ಇನ್ನೂ ಹೆಚ್ಚಿಸಲಾರದಾದೆವು. ಖಾದಿಯು ಇದನ್ನು ಸಹಿಸದು. ಈವರೆಗೆ ಜನಸಾಮಾನ್ಯರು ನೂಲು ತೆಗೆದು ನೇಯುತಿದ್ದರು. ಈಗಲೂ ಜನಸಾಮಾನ್ಯರೆ ಅದನ್ನು ಮಾಡಬೇಕಾಗಿದ್ದರೂ ಸ್ವಂತದ ಉಪಯೋಗಕ್ಕಾಗಿ ಮಾತ್ರ ಮಾಡಬೇಕಾಗಿದೆ. ಅ. ಭಾ. ಚ. ಸಂಘದ ಹೊಸ ಧೋರಣ ಅಯಶಸ್ವಿಯಾಗಿಲ್ಲ. ಸಾವಕಾಶವಾಗಿಯಾದರೂ ಅದು ಒಂದೇ ಸವನೆ ಪ್ರಗತಿ ಹೊಂದುತಿದೆಂಬುದು ಇತ್ತೀಚಿನ ಅಂಕಿಗಳಿಂದ ಗೊತ್ತಾಗುತ್ತದೆ.

"ಅಡಚಣಿಗಳೇನೊ ಇವೆ. ನೇಯುವುದು ಎಲ್ಲಕ್ಕಿಂತ ದೊಡ್ಡ ಅಡಚಣ. ನೇಕಾರರ ಮೇಲೆ ಸಾಕಷ್ಟು ವರ್ಚಸ್ಸು ನಮ್ಮದಿಲ್ಲ. ಇದರ ದೋಷ, ಮತ್ತೆ ನನ್ನದೇ ಆಗಿದೆ. ನೂಲುವುದನ್ನು ಕಲಿಯುವಂತೆ ಎಲ್ಲರೂ ನೇಯಲಿಕ್ಕೆ ಕಲಿಯಬೇಕೆಂದು ಪ್ರಾರಂಭದಿಂದಲೆ ನಾನು ಒತ್ತಾಯಪಡಿಸಿದ್ದರೆ ಇಂದು ಪರಿಸ್ಥಿತಿಯೆ ಬೇರೆಯಾಗುತಿದ್ದಿತು. ಅ. ಭಾ. ಚ. ಸಂಘದ ದುಡಿಯುವ ಬಂಡವಲು ಇಂದು ೨೫ ಲಕ್ಷ ಇದೆ. ಆ ಅಂಕಿಯನ್ನು ಮುಟ್ಟಬೇಕಾದರೆ ೨೫ ವರ್ಷ ಹಿಡಿದವು. ಈ ಅವಧಿಯಲ್ಲಿ ಹಿಂದುಸ್ತಾನ ೨೦ ಸಾವಿರ ಹಳ್ಳಿಗಳಲ್ಲಿ ನೆಲಸಿದ ೪॥ ಲಕ್ಷ ಬಡ ನೂಲುವವರು ಮತ್ತು ನೇಕಾರರಲ್ಲಿ ಮುಖ್ಯತಃ ೭ ಕೋಟಿ ರೂಪಾಯಿಗಳನ್ನು ಕೂಲಿಯೆಂದು ಅದು ಹಂಚಿದೆ. ಇಷ್ಟು ಅಲ್ಪ ಬಂಡವಲಿನಿಂದ ವ್ಯಾಪಕ ಕ್ಷೇತ್ರದಲ್ಲಿ ಇಷ್ಟೊಂದು ಪ್ರಚಂಡ ವ್ಯವಹಾರ ನಡೆದದ್ದರ ಬೇರೆ ಉದಾಹರಣೆ ನನಗೆ ಗೊತ್ತಿಲ್ಲ.

## ಸಾಮೂಹಿಕ ಕೊಲೆ

ಗೆಳೆಯರೊಬ್ಬರು ಬರೆಯುತ್ತಾರೆ:—

'ಮೈಸೂರು ಮತ್ತು ರಾಯರ ಸೀಮೆಯಲ್ಲಿ ಆಹಾರ ಪದಾರ್ಥಗಳ ಬರದ ಪರಿಸ್ಥಿತಿ ದಿನದಿನಕ್ಕೆ ಭೀಕರವಾಗುತ್ತ ನಡೆದಿದೆ. ಸಾಕಷ್ಟು ಪ್ರಮಾಣದಲ್ಲಿ ಆಹಾರ ಪದಾರ್ಥಗಳ ಸುರಿಮಳೆಯಾಗದಿದ್ದರೆ ಸ್ಥಳಿಕ ಸಹಕಾರ ಸಂಸ್ಥೆಗಳಿಗೆ ನೀಡಾ ಕೊಡಲಾರದ ಪರಿಸ್ಥಿತಿ ಬರುವುದು. ಈ ನೀಡಾ ಪ್ರಮಾಣವಾದರೂ ಕೇವಲ ಉಪವಾಸ ಸಾಯುವ ನೀಡಾ. ೨೪ ಔಂಸು ಸಿಕ್ಕಬೇಕಾದ ಒಕ್ಕಲಿಗನಿಗೆ ಕೇವಲ ೮ ಔಸು ನೀಡಾ ಸಿಕ್ಕುತ್ತಿದೆ. ನವಂಬರ ಮತ್ತು ಡಿಸೆಂಬರದಲ್ಲಿ ಉಪವಾಸದಿಂದ ಮರಣ ಹೊಂದುವುದನ್ನು ಎದುರಿಸಲು ಸಿದ್ಧರಾಗತಕ್ಕದ್ದು."

ಇವರು ಬರೆದಿದ್ದರಲ್ಲಿ ಅರ್ಧದಷ್ಟು ಸತ್ಯವಿದ್ದರೂ ಹಿಂದುಸ್ತಾನದಂಥ ವಿಶಾಲ ದೇಶದಲ್ಲಿ ಆಹಾರ ಬರವನ್ನು ಹೋಗಲಾಡಿಸುವ ನಮ್ಮ ಸಾಮರ್ಥ್ಯದ ಮೇಲೆ ಒಳ್ಳೆ ಪ್ರಕಾಶ ಬೀಳುವದು. ಈ ದೇಶದಲ್ಲಿ ಎಷ್ಟೊ ಭೂಮಿ ಪಡದಿದ್ದಿದೆ ಅದರ ದುರುಪಯೋಗವಾಗುತ್ತಿದೆ ಮತ್ತು ನದಿಗಳಿಗೆ ಒಡ್ಡು ಹಾಕಿ ನೀರು ಸಂಗ್ರಹಿಸಿಕೊಳ್ಳದರಿಂದ ಆ ನೀರು ವೇಗದಿಂದ ಸಮುದ್ರಕ್ಕೆ ಹೋಗಿ ಕೂಡುತಿದೆ. ಸಾಕಷ್ಟು ಪ್ರಮಾಣದಲ್ಲಿ ಆಯಾತಗಳ ಸುರಿಮಳೆಯಾಗದಿದ್ದರೆ ಎಂದರೆ ಹಿಂದುಸ್ತಾನದ ಹೊರಗಿನಿಂದ ಬರದಿದ್ದರೆ ನವಂಬರ ಮತ್ತು ದಿಸೆಂಬರದಲ್ಲಿ ಉಪವಾಸದ ಮೂಲಕ ಸಾಮೂಹಿಕ ಕೊಲೆ ನಡೆಯುವದು ನಿಶ್ಚಿತವೆಂದು ಸುದ್ದಿಗಾರ ಬರೆದಿದ್ದಾರೆ. ಇದು ಸಂಭವಿಸಿದ್ದಾದರೆ ಸರಕಾರ ಸಾಮೂಹಿಕ ಕೊಲೆಯ ಅಪರಾಧ ಮಾಡಿದಂತಾಗುವದೆಂದು ನಾನು ಸಂಬಂಧಿಸಿದ ಪ್ರತಿಯೊಬ್ಬನಿಗೆ ಸೂಚಿಸಬಯಸುತ್ತೇನೆ. ಆಹಾರ ಪದಾರ್ಥಗಳ ಪೂರೈಕೆಗಾಗಿ ಹೊರಗಿನವರನ್ನು ಅವಲಂಬಿಸುವದೆಂದರೆ ಉಪೋಷಣವನ್ನು ಬರಮಾಡಿಕೊಂಡಂತೆಯೆ ಸೈ. ಇಂದಿನಿಂದ ನವಂಬರದೊಳಗಾಗಿ ಸಾಕಷ್ಟು ಆಹಾರ ಪದಾರ್ಥ ಬೆಳೆಯಲು ಹಿಂದುಸ್ತಾನ ಅಸಮರ್ಥವಿದೆಂದು ಸ್ಪಷ್ಟ ಮಾಡಲಾಗಿದೆಯೆ? ಇಡೀ ಜಗತ್ತು ಹಿಂದುಸ್ತಾನದ ವಿರುದ್ಧ ದಿಗ್ಬಂಧನ ಮಾಡಿದರೂ ಕೋಟ್ಯವಧಿ ಜನರಿರುವ ಹಿಂದುಸ್ತಾನದಂಥ ವಿಶಾಲ ದೇಶವು ಉಪವಾಸ ಬಳಲಬೇಕೋ?

ಸೇವಾಗ್ರಾಮ ಮೋ. ಕ. ಗಾಂಧಿ
೧೬—೮—೪೬

"ಇದೇನೋ ಪ್ರಶಂಸನೀಯ ಸಂಗತಿ. ಅದರೆ ಅಪೂರ್ವವೇನಲ್ಲ. ಚೀನದ ಇಂಡಸ್ಕೊ ಇದಕ್ಕಿಂತ ಒಳ್ಳೆ ಕೆಲಸ ಮಾಡಿತು" ಎಂದುದ್ಗರಿಸಿದನು ಆ ಗೆಳೆಯ.

"ಇದೇನು ಯೋಗ್ಯ ತುಲನೆಯಲ್ಲ" ಎಂದುತ್ತರಿಸಿದರು ಗಾಂಧಿಜಿ. "ಸ್ಥಾನಬದ್ಧತೆಯಲ್ಲಿರುವಾಗ ನಾನು 'ನಿಮ್ ವೇಲ್ಸ ಪುಸ್ತಕವನ್ನೊದಿದೆ. ಅದನ್ನೋದಲು ನನಗೆ ಸಲಹೆ ಕೊಡಲಾಗಿದ್ದಿತು. ಚೀನ ರಾಷ್ಟ್ರೀಯ ಸರಕಾರದ ಸಹಾಯದಿಂದ ಅಸಾಮಾನ್ಯ ಪರಿಸ್ಥಿತಿಯಲ್ಲಿ ಇಂಡಸ್ಕೋದ ಚಟುವಟಿಕೆಗಳು ನಡೆದವು. ಅಲ್ಲದೆ ಉತ್ಪಾದನೆಯೆಲ್ಲ ಯುದ್ಧಕಾಲದ ಉತ್ಪಾದನೆಯಾಗಿತ್ತು ಉದಾಹರಣೆ ಕೊಡಲು ನೀನು ಚೀನಕ್ಕೆ ಧಾವಿಸಬೇಕಾಗಿರಲಿಲ್ಲ. ದಕ್ಷಿಣ ಹಿಂದುಸ್ತಾನದಲ್ಲಿ ಕಾಲಿಕತ್ತ ವಿಃಶನ್ನಿನವರ ಕಾರ್ಯವು ಅದಕ್ಕೂ ಉಚಿತ ಉದಾಹರಣೆಯಾಗುತಿದ್ದಿತು. ಇದರಲ್ಲಿ ಕ್ಷೇತ್ರವು ಸಂಕುಚಿತವಾಗಿದ್ದಿತು. ಆದರೆ ಖಾದಿಯು ಇಡೀ ಹಿಂದುಸ್ತಾನದ ಜನತೆಯ ಸೇವೆಗಾಗಿ ಪ್ರಯತ್ನಿಸುತ್ತಿದೆ."

"ಹೆಚ್ಚು ಕೂಲಿ ಕೊಡುವುದಾಗಿ ಹೇಳಿ ಇಂದು ನಾವು ಕಲಾಕುಶಲರನ್ನು ಆಕರ್ಷಿಸಲಾರೆವು. ದೇಶದಲ್ಲಿಯ ಕೂಲಿಯ ಮಟ್ಟವೀಗ ಬಹಳ ಏರಿದೆ."

"ನಮಗೇನು ಬೇಕಾಗಿಲ್ಲ" "ಸ್ವಂತಕ್ಕಾಗಿ ಉತ್ಪಾದಿಸಿಕೊಳ್ಳಬೇಕೆಂದು ನಿಮ್ಮ ಅರ್ಥವಲ್ಲವೆ?"

"ಅಹುದು."

## ಕ್ಯಾಸಿಗೆ ಗಾಂಧೀಜಿ ಹೇಳಿದ್ದೇನು?

"ಅದನ್ನು ವ್ಯವಹಾರ್ಯವೆಂತು ಮಾಡಬಲ್ಲುದು?" ಎಂದು ಗೆಳೆಯನು ಕೇಳಿದ.

—೬ ನೇ ಪುಟ ನೋಡಿರಿ

# ಖಾದಿಯ ಪರೀಕ್ಷಾ ಕಾಲ

[ ೭ ನೇ ಪುಟದಿಂದ ಮುಂದೆ ಸಾಗಿದ್ದು ]

ಗಾಂಧೀಜಿ ಉತ್ತರಿಸಿದರು.

"ಕಳೆದ ವರ್ಷ ನಾನು ಅದನ್ನು ಕ್ಯಾಸಿಯವರಿಗೆ ವಿವರಿಸಿದೆನು. ನನ್ನ ಯೋಜನೆಯನ್ನು ಸ್ವೀಕರಿಸುವುದರಿಂದ ಬಂಗಾಲದ ಬಟ್ಟೆ ಸಮಸ್ಯೆಯನ್ನು ಮಾತ್ರವೇ ಬಿಡಿಸದೆ ಇಡೀ ಹಿಂದುಸ್ತಾನದ ಬಟ್ಟೆ ಸಮಸ್ಯೆಯನ್ನು ಬಿಡಿಸಬಲ್ಲೆವು. ಜನತೆಗೆ ಜವಳಿಯನ್ನು ಪೂರಯಿಸದೆ ಬಟ್ಟೆ ಉತ್ಪಾದನೆಯನ್ನೆಂತು ಮಾಡಿಕೊಳ್ಳಬೇಕೆಂಬುದನ್ನು ಅವರಿಗೇ ಕಲಿಸಬೇಕು. ಅದಕ್ಕಾಗಿ ಅವರಿಗೆ ಅವಶ್ಯಕವಾದ ಉಪಕರಣಗಳನ್ನೂ ಕಚ್ಚಾಮಾಲನ್ನೂ ಪೂರಯಿಸಬೇಕು ಎಂಬುದೇ ನನ್ನ ಯೋಜನೆಯ ತಿರುಳು. ಇಂತಿಷ್ಟು ಅವಧಿಯನ್ನು ಅವರಿಗೆ ಕೊಡತಕ್ಕದ್ದು. ಅನಂತರ ಆ ಯೋಜನೆಯ ಕ್ಷೇತ್ರದಲ್ಲಿ ಜವಳಿಯನ್ನೆ ಪೂರಯಿಸಕೂಡದು. ಜರ್ಮನ್ ಪೂರ್ವ ಆಫ್ರಿಕೆಯಲ್ಲಿ ಮೊದಲನೇ ಮಹಾಯುದ್ಧದ ಕಾಲಕ್ಕಾದ ಬಟ್ಟೆ ಕೊರತೆಯನ್ನು ಹೋಗಲಾಡಿಸಲು ತಮ್ಮ ಬಟ್ಟೆಯನ್ನು ತಾನೇ ಮಾಡಿಕೊಳ್ಳಬೇಕೆಂದು ನಿಗ್ರೋಗಳ ಮನವಲಿಸಲಾಯಿತು. ಇದು ನಿಜವೊ ಸುಳ್ಳೋ, ಹಿಂದುಸ್ತಾನ ಮಾತ್ರ ತನ್ನ ಪರಂಪರಾಗತ ನೂಲುವ ಮತ್ತು ನೇಯ್ಗುವ ಕಲೆಯ ಸಂಪೂರ್ಣ ಉಪಯೋಗ ಮಾಡಿಕೊಂಡರೆ ಅದು ತನ್ನ ಅಡಚಣೆಗಳನ್ನು ನಿವಾರಿಸಿಕೊಳ್ಳುವುದಲ್ಲದೆ ಬಟ್ಟೆ ಉತ್ಪಾದನೆಯಲ್ಲಿ ಅಷ್ಟೊಂದು ಮುಂದುವರಿಯದಿದ್ದ ಇತರ ದೇಶಗಳಿಗೆ ಇಲ್ಲಿನ ಗಿರಣಿ ಬಟ್ಟೆಗಳನ್ನು ಕಳಿಸಲಿಕ್ಕೆ ಅನುಕೂಲವಾಗುವದು. ಹಿಂದುಸ್ತಾನದಲ್ಲಿಯ ಈ ಪರಂಪರೆಯಾದರೂ ಸಾರ್ವತ್ರಿಕವಾಗಿದೆ. ಕಲಾ ಕುಶಲರ ಈ ಪಾರಂಪರ್ಯವು ಅನುಪಮವಾಗಿದೆ.

"ಬಟ್ಟೆ ಕೊರತೆಯಿಷ್ಟೊಂದು ಉಗ್ರವಾಗಿದ್ದರೂ ಖಾದಿಯು ಆ ಸ್ಥಾನವನ್ನು ಆಕ್ರಮಿಸುವಲ್ಲಿ ಯಶಸ್ವಿಯಾಗಿಲ್ಲೆಂಬುದು ಸ್ಪಷ್ಟವಾಗಿದೆ" ಎಂದು ಆ ಗೆಳೆಯ ಅಗ್ರಹಪಡಿಸಿದ. "ಅದು ಸಂಧಿಯನ್ನು ಕಳೆದುಕೊಂಡಿತು"

"ಸರಕಾರದವರ ಕೈವಾಡಕ್ಕೆ ಅಭಿನಂದನೆಗಳು" ಎಂದು ನುಡಿದರು ಗಾಂಧೀಜಿ. "ಅವರು ಖಾದೀ ಕಾರ್ಯಕರ್ತರನ್ನು ಸೆರೆ ಹಿಡಿದರು. ಖಾದೀ ಸಂಗ್ರಹವನ್ನು ಕೂಡ ಸುಟ್ಟರು. ಖಾದೀ ಉತ್ಪಾದನೆಗೆ ಶಕ್ಯವಿದ್ದಷ್ಟು ಅಡಚಣೆಯುಂಟು ಮಾಡಿದರು.

"ಈ ಅಂತರಾಳ ಕ್ಷೇತ್ರ ಬೆಳೆಯುತಲೆ ಇದೆ. ಉತ್ಪಾದನೆಯ ಧಾರಣೆಗಳು ಈಗಾಗಲೆ ಕೊನೆಯ ಪಟ್ಟವನ್ನು ಮುಟ್ಟಿವೆ. ಆದರೂ ಈಗ ಕೊಡುತಿರುವ ಕೂಲಿ ನಿರುದ್ಯೋಗಿಗಳನ್ನು ಕೂಡ ಆಕರ್ಷಿಸಲು ಸಮರ್ಥವಾಗಿಲ್ಲ."

"ಈ ನಿರುದ್ಯೋಗಿಗಳೆಲ್ಲಿರುವರು?"

"ಬಳ್ಳೇದು. ಒಂದು ಲಕ್ಷ ಜನ ಹಿಂದ ರಾಷ್ಟ್ರೀಯ ಸೈನಿಕರಿರುವರು"

"ನಾನವರಿಗೆ ಈ ಕಾರ್ಯ ಕೈಕೊಳ್ಳಲು ಹೇಳಿದೆನು. ಆದರೆ ಇನ್ನೂ ಅವರಿಂದ ಉತ್ತರ ಬಂದಿಲ್ಲ. ಕುದುರೆಯನ್ನು ನದಿಗೇನೋ ನೀವು ಹೊಡೆದ್ಕೊಂಡು ಹೋಗಬಹುದು, ಆದರೆ ಅದು ನೀರು ಕುಡಿಯುವಂತೆ ನೀವು ಒತ್ತಾಯಪಡಿಸಲಾರಿರಿ."

## ಒತ್ತಾಯವಿಲ್ಲ

"ಸರಕಾರ ಒಂದು ಯೋಜನೆಯನ್ನು ಗೊತ್ತುಪಡಿಸಬಾರದೊ ?"

"ಮದ್ರಾಸದಲ್ಲಿ ಹಾಗೆ ಮಾಡಿದೆ. ಅದನ್ನೀಗ ವಿಮರ್ಶಿಸಲಾಗುತಿದೆ. ಮೇಲಿನಿಂದ ಯಾವದನ್ನು ಹೇರುವದು ಸಾಧ್ಯವಿಲ್ಲ. ಎಲ್ಲವನ್ನು ಕೆಳಗಿನಿಂದಲೆ ಮಾಡುತ್ತ ಹೋಗಬೇಕು. ಮತ್ತು ಇದನ್ನು ಕಾರ್ಯರೂಪದಲ್ಲಿ ತರುವವರು ನಿಷ್ಠಾವಂತರು ಮತ್ತು ಸೇವಾಕಾರ್ಯದಲ್ಲಿ ಆಸ್ಥೆಯುಳ್ಳವರಿರಬೇಕಾಗುವುದು. ಸರಕಾರದ ಹುಕುಮಿನಿಂದ ಕಾರ್ಯ ಸಾಧ್ಯವಾಗದು. ಸರಕಾರದವರು ಸಹಾಯ ಮಾಡಬಲ್ಲರು. ನನ್ನ ಈ ಯೋಜನೆಯನ್ನು ಕಾರ್ಯರೂಪದಲ್ಲಿ ತರುವುದನ್ನು ನನಗೇ ಬಿಟ್ಟುಕೊಟ್ಟರೆ ಮತ್ತು ಸರಕಾರದವರು ಅವಶ್ಯಕ ಸಾಕಷ್ಯಗಳನ್ನು ಒದಗಿಸಿದರೆ ಅದನ್ನು ಕಾರ್ಯಕಾರಿ ಮಾಡಲು ನಾನು ಸಿದ್ಧನಿರುವೆನು. ಕ್ಯಾಸೀ ಇವರಿಗೆ ನಾನು ಈ ಮಾತನ್ನು ಹೇಳಿದ್ದೇನೆ. ನನ್ನ ಆಹ್ವಾನವು ಇನ್ನೂ ಇದೆ.

"ನಿಮ್ಮ ಯೋಜನೆಯಲ್ಲಿ ಹೇಳಿದಂತೆ ಯಾವದೊಂದು ಕ್ಷೇತ್ರಕ್ಕೆ ಜವಳಿ ಪೂರಯಿಕೆಯನ್ನು ನಿಲ್ಲಿಸಿ ಬಿಟ್ಟರೆ ಸದ್ಯದ ಅಸಂತೋಷ ಮತ್ತಷ್ಟು ಹೆಚ್ಚಿ ವಿಪ್ಲವಕ್ಕೆ ಕೂಡ ಕಾರಣವಾಗುವ ಗಂಡಾಂತರವಿದೆ" ಎಂದು ಗೆಳೆಯ ನಡುವೇ ಬಾಯಿ ಹಾಕಿದ. "ಅಸಂತೋಷದ ಬೇಗೆಯನ್ನು ಹಬ್ಬಿಸಲು ಯಾವದೇ ಸಂಧಿಯನ್ನು ಹುಡುಕುವ ಜನರಿರುವರು. ಮದ್ಯಪಾನ ಪ್ರತಿಬಂಧ ಮಾಡಿದ್ದನ್ನು ಮುಂಬಯಿಯಲ್ಲಿಯ ಕೆಲವರು 'ಅತ್ಯಾಚಾರ' ವೆಂದು ಎಣಿಸಿದಂತೆ ಬಟ್ಟೆ ಪೂರಯಿಕೆಯನ್ನು ನಿರ್ಬಂಧಿಸಿದ್ದೂ ಅತ್ಯಾಚಾರವೆಂದು ಎಣಿಸುವವರೂ ಇರುವರು. ಅಂಥ ದೊಂಬಿಯನ್ನು ನಾವೆಂತು ನೆನಸುವದು ಮತ್ತು ಬರಮಾಡಿಕೊಳ್ಳುವದು ? ಇದೇನು ವಿಧಾಯಕ ಮಾರ್ಗವಲ್ಲ. ಇದೊಂದು ಬಗೆಯ ಒತ್ತಾಯವೆನಿಸುತ್ತದೆ."

"ಒತ್ತಾಯದ ಪ್ರಶ್ನೆಯೆಲ್ಲಿದೆ ? " ಎಂದರು ಗಾಂಧೀಜಿ. "ಸದ್ಯದ ಪರಿಸ್ಥಿತಿಯಲ್ಲಿ ಎಲ್ಲೆಡೆಗೆ ಪೂರಯಿಸುವಷ್ಟು ಬಟ್ಟೆಯಿರುವದಿಲ್ಲ. ಬೇಡಿಕೆಗಿಂತ ಕಡಿಮೆ ಸಂಗ್ರಹವಿದ್ದರೆ ಸೀವಾ ಅವಶ್ಯವಾಗುತ್ತದೆ. ಜಾಣತನದಿಂದ ಹಂಚಿಕೆಮಾಡುವುದವಶ್ಯವಾಗಿದೆ. ಇನ್ನು ಕೆಲ ದಿನಗಳ ವರೆಗೆ ಹೊರಗಿನಿಂದ ಬಟ್ಟೆ ಸಂಗ್ರಹ ಬರುವಂತಿಲ್ಲ. ತಮ್ಮ ಬಟ್ಟೆ ಉತ್ಪಾದನೆಯನ್ನು ಬೆಳೆಸಲು ಅನೇಕ ಮತ್ತು ಇಂಗ್ಲಂಡು ಒಳ್ಳೆ ಪರಿಶ್ರಮ ಪಡುತಿವೆ. ಆದರೆ ಅದೆಲ್ಲ ಆ ದೇಶಗಳಿಗೇ ಅವಶ್ಯ. ನಾವು ನಮ್ಮ ಜವಳೀ ಉದ್ಯೋಗದಲ್ಲಿ ರಾಷ್ಟ್ರೀಕರಣ ಮಾಡಿ ಎರಡು ಸರತಿಯಿಂದ ಕೆಲಸ ನಡೆಸಿದ್ದಾದರೆ ಕದಾಚಿತ ಬಟ್ಟೆಯ ಕೊರತೆಯ ಸಮಸ್ಯೆ ಬಗೆಹರಿಯಬಹುದು. ಆದರೆ ಆದರಿಂದ ಜನಸಾಮಾನ್ಯರ ದಾರಿದ್ರ್ಯ ಹಿಂಗಲಾರದು. ಅನಂತರ ನಾನು ಖಾದಿಗಾಗಿ ಅಷ್ಟೊಂದು ಕೂಗಿಕೊಳ್ಳಲಾರೆ. ಇದು ಅಷ್ಟೊಂದು ಮಹತ್ವದ್ದಲ್ಲೆಂದು ಇದರರ್ಥವಲ್ಲ. ಆದರೆ ಆ ಬಗ್ಗೆ ಜನರ ಮನವರಿಕೆ ಮಾಡಿಕೊಡಲು ನಾನು ಸಮರ್ಥನಾಗಲಾರೆ.

## ಖಾದಿ ಮತ್ತು ನವಮನ್ವಂತರ

" ನನ್ನ ಮುದ್ದೆ ಅದಲ್ಲ " ಎಂದುತ್ತರಿಸಿದ ಗೆಳೆಯ. "ಸರಕಾರದ ಎಲ್ಲ ಉಪಾಯಗಳಲ್ಲಿ ಕೆಲಪಟ್ಟಿಗೆ ಒತ್ತಾಯವಿದ್ದೇ ಇದೆ. ಜಕಾತಿ, ಸಂರಕ್ಷಣೆ, ಅಬಕಾರಿ ಕರ ಮೊದಲಾದವುಗಳೆಲ್ಲ ಒಂದು ಬಗೆಯ ಒತ್ತಾಯದ ಮಾದರಿಗಳೇ ಆದರೆ ಅನ್ಯಾಯವಾಗಿ ಅನವಶ್ಯಕವಾಗಿ ಇವನ್ನು ಉಪಯೋಗಿಸಿದರೆ ಮಾತ್ರ ಕೆಡಕಾಗುವದು. ಸರಕಾರದ ಒತ್ತಾಯದಿಂದ ಮೂಲಭೂತ ಅಸ್ಥಿರ ಆರ್ಥಿಕ ಪರಿಸ್ಥಿತಿಯುಂಟಾದರೆ ಒಂದಾನೊಂದು ದಿನ ಅದು ಸ್ಫೋಟವಾಗಿ ಎಲ್ಲೆಡೆಯಲ್ಲಿ ನಾಶವನ್ನು ಪಸರಿಸಬಹುದು. ಸದ್ಯದ ಮಾದರಿಯಲ್ಲಿ ಖಾದಿ ಉತ್ಪಾದನೆಯ ಕಾರ್ಯ ನಡೆದರೆ ಮೇಲೆ ಹೇಳಿದ ಕಕ್ಷೆಯಲ್ಲಿ ಅದು ಬರುವದೊ ಹೇಗೆಂಬ ಬಗ್ಗೆ ನಾನು ವಿಚಾರಿಸುತಿದ್ದೇನೆ. ಉದಾಹರಣಾರ್ಥವಾಗಿ ಕಾಶ್ಮೀರದಲ್ಲಿಯ ಉಣ್ಣೆ ಬಟ್ಟೆಗಳ ಉತ್ಪಾದನೆ ಸ್ವಂತ ಉಪಯೋಗಕ್ಕಾಗಿ ಅಲ್ಲ. ಕಾಶ್ಮೀರಿನ ಹೊರಗಿರುವ ಮೋಹಕ ವಸ್ತುಗಳಿಗಾಗಿ ಅವರು ಅವನ್ನು ಪೇಟೆಗೆ ಕಳಿಸಿಕೊಡುತ್ತಾರೆ. ಅವೊಳ್ಳೇ ಲೋಕಪ್ರಿಯವಾಗಿವೆ. ಯಂತ್ರದಿರದ ಹಂಜಿ ಮಾಡುವವನ್ನು ಪ್ರಾರಂಭಿಸಿದರೆ ಎಲ್ಲ ಬಗೆಯ ಸ್ಪರ್ಧೆಯನ್ನು ಅದು ಸಹಿಸಬಲ್ಲದು ಆದರೆ ಹಾಗೆ ಮಾಡುವದೆಂದರೆ ಖಾದಿಯ ಮೂಲಭೂತತತ್ವಕ್ಕೆ ಅರಿದಾಳ ಬಡಿದಂತೆ. ಏನಾದರೊಂದು ಒಪ್ಪಂದಕ್ಕೆ ಬರುವದು ಸಾಧ್ಯವಿವೆಲ್ಲ ಎಂದು ನಾನು ವಿಚಾರಿಸುತಲಿದ್ದೇನೆ. ಸದ್ಯದ ಯಂತ್ರ ಯುಗದಲ್ಲಿ ಮನೆಮಾರಿಗೆಯ ಉದ್ಯೋಗಗಳನ್ನೆಲ್ಲ ಮಾನವ ಶಕ್ತಿಯ ಸಹಾಯ ಮಾತ್ರದಿಂದಲೆ ನಡೆಸಿದರೆ ಅವು ಜೀವಂತ ಉಳಿಯುವ ಸಂಭವ ತೋರುವುದಿಲ್ಲ. ಆರ್ಥಿಕ ಒಲವುಗಳಿಗೆ ಯೋಗ್ಯ ದಿಸೆ ತೋರಿಸಲು ನಾವು ಪ್ರಯತ್ನಿಸಬೇಕು. ಅವುಗಳ ವಿರುದ್ಧ ದಿಸೆಯಲ್ಲಿ ಹೋಗಲು ನಾವು ಪ್ರಯತ್ನಿಸಬಾರದು. ಉದಾಹರಣಾರ್ಥವಾಗಿ ನಾವು ಮನೆಮಾರಿಗೆಯ ಕೈಗಾರಿಕೆಗಳನ್ನು ಅಗ್ಗ ವಿದ್ಯುಚ್ಛಕ್ತಿಯ ಸಹಾಯದಿಂದ ನಡೆಸಿದ್ದಾದರೆ ಅವು ಸ್ವಂತದ ಮೂಲಭೂತ ಸ್ವರೂಪವನ್ನು ಬಿಡದೆ ಜೀವಂತ ಬಾಳಬಲ್ಲವು. ನಮಗೆ ಬೇಕಾದುದೇನಂದರೆ ವಿಕೇಂದ್ರೀಕೃತ ಉತ್ಪಾದನೆ. ನೀರಾವರಿ ಯೋಜನೆಗಳಿಗೆ ಸಹಾಯಕವೆಂದು ಅಗ್ಗವಾದ ಹ್ಯಾಡ್ರಾಲಿಕ್ ಶಕ್ತಿಯ ಅಭಿವೃದ್ಧಿಯ ಯೋಜನೆಗಳನ್ನು ನಾವು ಸಿದ್ಧಪಡಿಸಬೇಕು. ೭ ರಿಂದ ೧೦ ವರುಷಗಳ ವರೆಗೆ ಅವು ಕಾರ್ಯಮಾಡಬಲ್ಲವು. ಅನಂತರವೆ ಸಂಯುಕ್ತ ಪ್ರಾಂತದಲ್ಲಿಯ ಪ್ರತಿಯೊಂದು ಹಳ್ಳಿಗೆ ವಿದ್ಯುಚ್ಛಕ್ತಿಯನ್ನು ಕೊಡಲು ಸಾಧ್ಯವಾಗುವದು. ಈ ಪರಿಸ್ಥಿತಿಯಲ್ಲಿ ಸದ್ಯದ ರೀತಿಯಲ್ಲಿಯೆ ನಾವು ಖಾದೀ ಕಾರ್ಯ ನಿರ್ವಹಿಸಲು ಸಮರ್ಥರಾಗಬಲ್ಲೆವೋ ? ವಾಸ್ತವವಾಗಿ ಬೇಡಿಕೆ ಖಾತ್ತು ಪೂರೈಕೆ ಸಮಪ್ರಮಾಣದಲ್ಲಿರಬೇಕು. ಆದರೆ ಖಾದಿಯನ್ನು ಕಾಯಂ ತಳಹದಿಯ ಮೇಲೆ ಸಂಸ್ಥಾಪಿಸುವುದನ್ನು ಬಿಟ್ಟುಗೊಟ್ಟು ಕೃತ್ರಿಮ ನಿರ್ಬಂಧ ಹಾಕಿ ನಾವು ಅದನ್ನು ಪ್ರಾರಂಭದಲ್ಲಿಯೇ ಚಿವುಟಿ ಬಿಡುತಿರುವೆವು. ಇದರ ಪರಿಣಾಮವಾಗಿ ಲಂಚಗುಳಿತನ ಮತ್ತು ಅಪ್ರಾಮಾಣಿಕತನ ಮನೆಮಾಡಿವೆ. ಖೊಟ್ಟಿ ನಾಣ್ಯದಂತೆ ಅದೇ ಅದೇ ನೂಲನ್ನು ಮತ್ತೆ ಮತ್ತೆ ಖಾದೀ ಭಾಂಡಾರಗಳಲ್ಲಿ ಕೊಡಲಾಗುತ್ತಿದೆ. ಇದರ ಆರ್ಥಿಕ ಮಟ್ಟವನ್ನು ಬಿಟ್ಟುಗೊಟ್ಟರೂ ಖಾದಿಯು ಸಾಂಸ್ಕೃತಿಕ ಮತ್ತು ರಾಜಕೀಯ ಸ್ಥಾನವನ್ನು ಪಡೆದಿದೆ. ಸಮವಸ್ತ್ರವೆಂದು ಅದನ್ನು ಧರಿಸಲು ಅನೇಕರು ಆತುರರಿರುವರು. ಆಸ್ಪತ್ರಿಗಳು ತಮಗೆ ಬೇಕಾದ ಬಟ್ಟೆಗಳಿಗಾಗಿ ಖಾದಿಯನ್ನೇ ಉಪಯೋಗಿಸಬಯಸುತಿವೆ. ಹಿಂದ ರಾಷ್ಟ್ರ ದಳದವರು ಖಾದೀ ಸಮವಸ್ತ್ರ ಧರಿಸಬಯಸುತಿವೆ. ಅದ್ದರಿಂದ ಎಲ್ಲಿಯೂ ಖಾದೀ ಸಿಕ್ಕದಂತಹ ಪರಿಸ್ಥಿತಿ ಬಂದಿದೆ. ಹೊಸ ಯೋಜನೆಗೆ ದೀರ್ಘದಂಡ ನಮಸ್ಕಾರ ! ಕೇವಲ ಮೋಸ ಮತ್ತು ಅಪ್ರಾಮಾಣಿಕತೆಗಳಿಗೇ ಇದು ಸಹಾಯಕ.

## ನಾನೇನು ಭಯಭೀತನಾಗಿಲ್ಲ

"ಯಾರು ಸ್ವತಃ ನೂಲಲಾರರೊ ಮತ್ತು ಯಾರಿಗೆ ನೂಲುವದು ಬೇಡವಾಗಿದೆಯೊ ಅಂಥವರೆಲ್ಲ ಗಿರಣಿ ಖಾದಿಯನ್ನು ಧರಿಸಬೇಕು, ಹಿಂದೀ ಗಿರಣಿಗಳದ್ದಾಗಲಿ ಇಲ್ಲವೆ ಪರದೇಶಿ ಗಿರಣಿಗಳದ್ದಾಗಲಿ ಯಾವದಾದರೂ ಅಷ್ಟೆ" ಎಂದರು ಗಾಂಧೀಜಿ. "ನಾನು ಬಿಚ್ಚುಗಣ್ಣಿನಿಂದ ಮಾರ್ಗ ಕ್ರಮಿಸಹತ್ತಿದ್ದೇನೆ. ಖಾದಿಯ ಪೂರೈಕೆ ಬೇಡಿಕೆಗಿಂತ ಕಡಿಮೆಯಾದುದು ಖಾದಿ ಇತಿಹಾಸದಲ್ಲಿ ಇದೇ ಮೊದಲನೇಸಲವಲ್ಲ. ಪ್ರತಿ ಸಲ ವೀರೋಚಿತ ಉಪಾಯಗಳನ್ನು ಕೈಕೊಂಡು ಗಂಡಾಂತರದಿಂದ ಪಾರಾಗಿದ್ದುಂಟು. ಈ ಸಲ ಬೇರೆ ಬಗೆಯ ಪರಿಣಾಮವುಂಟಾಗಲಾರದು. ವಿಶ್ವಾಸ ಮತ್ತು ತಾಳ್ಮೆಯಿಂದ ನಾವಿರಬೇಕಾದುದು ಮಾತ್ರ ಅವಶ್ಯ. ಯೋಗ್ಯ ಉಪಾಯ ಯೋಜಿಸುವ ಧೈರ್ಯವೂ ಇರಬೇಕು. ನಾನೀಗ ಅದನ್ನೇ ಮಾಡುತಿದ್ದೇನೆ ಈ ರೀತಿ ಕಾರ್ಯಮಾಡುವಾಗ ಖಾದಿಯು ನಾಶವಾದರೆ ಆ ಗಂಡಾಂತರವನ್ನು ಎದುರಿಸಲೂ ನಾವು ಸಿದ್ಧರಾಗಬೇಕು."

"ಪ್ರಮೇಯ ಸಿದ್ಧವಾದಂತೆಯೇ ಆಯಿತು." ಎಂದು ಜೋಡಿಸಿದನು ಗೆಳೆಯ. "ಜನರಿಗೆ ಅನುಕೂಲವಾಗುವಂತೆ ಆದಿರುವದಿಲ್ಲ. ಜನರ ಅವಶ್ಯಕತೆಗಳಂತೆ ನಾವು ನಮ್ಮ ಧೋರಣವನ್ನು ಮಾತ್ರ ಸರಿಪಡಿಸಿಕೊಳ್ಳಬೇಕು."

"ನಾನು ಅದನ್ನು ಮಾಡಲಾರೆ. ತಪ್ಪು ಕಂಡುಬಂದರೆ ನಾನು ಅದನ್ನು ತಿದ್ದಿಕೊಳ್ಳಲಿಕ್ಕೆ ಬೇಕು. ಅದಕ್ಕೆ ಅವಧಿ ಹತ್ತಬಹುದು. ಅಂತೆಯೇ ಕಾಂಗ್ರೆಸ ಘಟನೆಯಲ್ಲಿರುವ ಖಾದಿ ನಿಯಮವನ್ನು ಕಿತ್ತಿ ಹಾಕಿರೆಂದು ನಾನು ಸೂಚಿಸಿರುವೆನು. ಆಸಾಮ ಕಾಂಗ್ರೆಸ್ಸಿನ ಅಧಿವೇಶನದಲ್ಲಿ ಆ ನಿಯಮವನ್ನು ತೆಗೆದು ಹಾಕಲು ಅಯಶಸ್ವಿ ಪ್ರಯತ್ನ ಮಾಡಿದಾಗ ನನಗೆ ಸಮಾಧಾನವೆನಿಸಿತ್ತು. ಈಗ ಅದನ್ನು ಕಿತ್ತಿ ಹಾಕಬೇಕೆಂಬುದಕ್ಕೆ ನಾನು ಪ್ರೋತ್ಸಾಹನ ಕೊಡುವೆನಲ್ಲದೆ ಅದನ್ನು ಸ್ವಾಗತಿಸುವೆನು. ಅದರಲ್ಲಿ ಮಹತ್ವದ ಗುಣವಿದ್ದರೆ ಕಾಂಗ್ರೆಸ್ಸು ಅದನ್ನು ಕಿತ್ತಿ ಹಾಕಿದರೂ ಖಾದಿಯು ಜೀವಂತ ಉಳಿಯುವದು. ಆ ಗುಣವಿಲ್ಲದಿದ್ದರೆ ಅದು ನಾಶಹೊಂದುವದಕ್ಕೇ ತಕ್ಕುದಾಗಿದೆ."

"ಆದರೆ ಅದರಿಂದ ನಮ್ಮ ಮೂಲಭೂತ ಸಮಸ್ಯೆ ಬಗೆಹರಿದಂತಾಗುವುದಿಲ್ಲ." ಎಂ ದ ರು ಗಾಂ ಧೀ ಜಿ. "ಪ್ರತಿಪಾದನೆಯಿಂದ ನಿಮ್ಮ ಮನವರಿಕೆಮಾಡಿಕೊಡಲಾರೆನೆಂದು ನನಗೆ ಭೀತಿಯಿದೆ ಯಾರದು ಸರಿಯಾಗಿದ್ದಿತೆಂಬುವನ್ನು ಕಾಲವೆ ತೋರಿಸಿಕೊಡುವದು."

## ನಿದಾನ ಮತ್ತು ಉಪಾಯ

"ನೆಯ್ಗೆಯವನೆ ದೊಡ್ಡ ಸಮಸ್ಯೆಯೆಂದು ನೀವು ಹೇಳಿದಿರಿ. ಗಿರಣಿ ನೂಲು ನೇಯುವ ನೇಕಾರ ಇಂದು ದಿನಾಲು ೩ ರೂಪಾಯಿಯಷ್ಟು ಗಳಿಸಬಲ್ಲನು. ನೂಲುವವ ಮತ್ತು ಕೈನೂಲು ನೇಯುವವ ಕಡಮೆ ಕೂಲಿಗಾಗಿ ಕೆಲಸ ಮಾಡಲು[illegible] ಎಂದು ಮುಂದುವರಿಸಿದ ಗೆಳೆಯ.

"ಅವನು ಹಾಗೆ ಮಾಡಬೇಕೆಂದು ನಾನು ಹೇಳುವದಿಲ್ಲ" ಎಂದರು ಗಾಂಧೀಜಿ. "ಅಂತೆಯೆ ನಾನು ಕೈನೂಲಿನ ಜೋಡೆಳೆ ಮಾಡಲು ಸೂಚಿಸಿರುವೆನು. ಅವನು ಗಿರಣಿ ನೂಲಿನ ಪೂರೈಕೆಯನ್ನವಲಂಬಿಸಿದರೆ ಅವನ ಇತಿಶ್ರೀಯೇ ಆಯಿತು. ಕೈಮಗ್ಗದ ನೇಕಾರನು ಪರಿಣಾಮಕಾರಕ ರೀತಿಯಲ್ಲಿ ಗಿರಣಿಗಾರರೊಡನೆ ಸ್ಪರ್ಧಿಸಹತ್ತಿದರೆ ಗಿರಣಿಗಾರರು ಅವನಿಗೆ ನೂಲು ಪೂರೈಸುವಷ್ಟು ಉದಾರಿಗಳಲ್ಲ. ಆದರೆ ನೇಕಾರನು ಈ ಜೋಡೆಳೆಯ ಕೈನೂಲಿನಿಂದ ಬಟ್ಟೆಗಳನ್ನು ನೆಯ್ದದ್ದಾದರೆ ಕೊನೆಯಲ್ಲಿ ಗಿರಣಿ ನೂಲು ನೇಯುವ ನೇಕಾರನಿಗಿಂತ ಅವನ ಪರಿಸ್ಥಿತಿ ಚೆನ್ನಾಗುವದು. ಏಕೆಂದರೆ ಅವನಿಗೆ ಇಡೀ ವರ್ಷ ಒಂದೇ ಸವನೆ ಕೆಲಸ ಸಿಕ್ಕುವದು.

"ಜವಳಿ ಉದ್ಯೋಗದ ತಳಹದಿಯೇ ಸಂಪೂರ್ಣವಾಗಿ ಬದಲಾವಣೆ ಹೊಂದಿದೆ." ಮಾತು ಮುಂದರಿಸಿದ ಗೆಳೆಯ. "ಕಲ್ಲಿದ್ದಲಿ ಗಾಳಿ ಮತ್ತು ನೀರಿನಿಂದ ಶಾಸ್ತ್ರೀಯ ನೂಲನ್ನೀಗ ಸಿದ್ಧಪಡಿಸುತಿರುವರು. ನೂಲಿನ ಎಳೆಗಳನ್ನು ಅಂಟಿನಿಂದ ಗಟ್ಟಿ ಮಾಡುವ ರೇಯೊನ ತರ ಸ್ಥಳವನ್ನಾಕ್ರಮಿಸಹತ್ತಿವೆ. ವ್ಯವಹಾರ್ಯ ತಳಹದಿಯ ಮೇಲೆ ನಮ್ಮ ಖಾದಿ ಧೋರಣೆ ನಿಂತಿದೆಂದು ನಾವು ಮನವರಿಕೆಮಾಡಿಕೊಳ್ಳದಿದ್ದರೆ ಮತ್ತು ಎಲ್ಲ ರೀತಿಯಿಂದ ಅದು ಸರಿಯಾಗಿದೆಂದು ನಿಶ್ಚಿತ ಮಾಡಿಕೊಳ್ಳದಿದ್ದರೆ ಖಾದಿಯು ಅಯಶಸ್ವಿಯಾಗುವಲ್ಲಿ ಸಂದೇಹವಿಲ್ಲ."

"ಹಾಗಾಗಬಹುದು. ಆದರೆ ಅದಕ್ಕಾಗಿ ಪಟ್ಟ ಪರಿಶ್ರಮ ನಿರರ್ಥಕವಾಗುವುದಿಲ್ಲ." ಎಂದುತ್ತರಿಸಿದರು ಗಾಂಧೀಜಿ.

## ಕಳವಳಕ್ಕೆ ಉಪಾಯ

"ಒಳ್ಳೆಯ ಪ್ರಯತ್ನವಾವುದೂ ನಿರರ್ಥಕ ಹೋಗುವುದಿಲ್ಲ. ಆದರೆ ಖಾದಿ ಧೋರಣೆಯ ನಿಮ್ಮ ಹೊಸ ಮಾರ್ಪಾಡು ಅನೇಕ ನಿಷ್ಠಾವಂತ ಖಾದಿ ಪ್ರೇಮಿಗಳಲ್ಲಿ ಮತ್ತು ಖಾದಿ ಕಾರ್ಯಕರ್ತರಲ್ಲಿ ಕಳವಳವನ್ನುಂಟುಮಾಡಿದೆ. ಅವರ [illegible] ವನ್ನು ಹೋಗಲಾಡಿಸಲಿಕ್ಕೆಬೇಕು. ಅವರಲ್ಲಿ ಹಲವರು ಅಪ್ರಮಾಣಿತ ಖಾದಿಯನ್ನು ಕೊಳ್ಳಲು ಹವಣಿಸುತಿರುವರು."

"ಖಾದಿಯಲ್ಲಿ ಅವರಿಗೆ ವಿಶ್ವಾಸವಿಲ್ಲದಿದ್ದರೆ ಆ ಕಳವಳವನ್ನು ಹೋಗಲಾಡಿಸುವದು ಶಕ್ಯವಿಲ್ಲ."

ಖಾದಿಯ ಧಾರಣೆಯನ್ನು ಏರಿಸಿದರೂ ಚಿಂತೆಯಿಲ್ಲ ಅವರು ಬೇಡಿದಂತೆ ಖಾದಿಯನ್ನು ಪೂರಯಿಸಬೇಕು."

"ಇದರರ್ಥ ಖಾದಿಯೊಂದು ಮೋಹಕ ವಸ್ತುವೆಂದಾಗುವದು. ಈ ಉದ್ದೇಶಕ್ಕಾಗಿ ಇಂಥ ದೊಡ್ಡ ಸಂಸ್ಥೆಯ ಉಪಯೋಗಮಾಡಿಕೊಳ್ಳುವುದು ಸರಿಯಾಗಲಾರದು. ನಮ್ಮ ಖಾದೀ ಧೋರಣೆಯಲ್ಲಿ ಏನಾದರೂ ಮೂಲಭೂತ ದೋಷವಿದ್ದರೆ ಅದನ್ನು ಕಂಡು ಹಿಡಿದು ಅದಕ್ಕುಪಾಯ ಮಾಡುವದು ನಮ್ಮ ಕರ್ತವ್ಯ. ಈ ವಿಧಾನದಲ್ಲಿ ಖಾದಿಯ ತಳಹದಿಯೇ ಸ್ಥಿರವಾಗಿಲ್ಲೆಂದು ಕಂಡು ಬಂದರೆ ಅದರ ಸುಂದರ ಸಮಾಧಿಯನ್ನೇ ಕಟ್ಟಿ ಬಿಡಬೇಕು. ಇಂದು ಖಾದಿಯ ಪರೀಕ್ಷಾಕಾಲ. ಅದು ತನ್ನಲ್ಲಿದ್ದ ಶಕ್ತಿಯ ಸಹಾಯದಿಂದ ಸಂಪೂರ್ಣ ಯಶಸ್ವಿಯಾಗಿ ಹೊರಹೊಮ್ಮುವದು. ಆದರೆ ಆದರಲ್ಲಿ ಆ ಶಕ್ತಿಯಿಲ್ಲದಿದ್ದರೆ ಇಷ್ಟೊಂದು ಪರಿಶ್ರಮ ಪಟ್ಟದ್ದು ಬೂದಿಯಲ್ಲಿ ಹೋಮ ಮಾಡಿದಂತಾಗುತ್ತದೆ.

"ಯಾವುದೊಂದು ವಸ್ತುವಿಗೆ ಪ್ರಚಂಡ ಮತ್ತು ನಿಜವಾದ ಬೇಡಿಕೆಯಿದ್ದು ಪೂರೈಕೆ ಕಡಮೆಯಿದ್ದಾಗ ಆರ್ಥಿಕ ಪರಿಸ್ಥಿತಿಯನ್ನು ಸರಿಪಡಿಸಿಕೊಳ್ಳಬೇಕಾದರೆ ಉಪಾಯಗಳನ್ನು ಯೋಜಿಸಿ ಪೂರೈಕೆ ಮಾಡಬೇಕಾದುದು ಅವಶ್ಯವೆಂಬುದಿಷ್ಟೆ ನನಗೆ

— ೯ನೆ ಪುಟ ನೋಡಿರಿ



# ನಾ ರ ದ ಪ ತ್ರ

## ಮಹಾದೇವ ದೇಸಾಯಿ ದಿನ

ಮಹಾದೇವಭಾಯಿ ಸೆರೆಮನೆಯಲ್ಲಿ ನಿಧನಹೊಂದಿದ ನಾಲ್ಕನೆ ವರ್ಷಶ್ರಾದ್ಧ ದಿನವನ್ನು ಅಗಸ್ಟ ೧೫ ಕ್ಕೆ ಸೇವಾಗ್ರಾಮದ ವಿವಿಧ ಸಂಸ್ಥೆಗಳು ಒಂದಾಗಿ ಆಚರಿಸಿದವು. ವೈತಾಲಿಕದಿಂದ ಆ ದಿನವನ್ನು ಪ್ರಾರಂಭಿಸಿ ವಿದ್ಯಾರ್ಥಿಗಳೂ ಕಾರ್ಯಕರ್ತರೂ ಮಹಾದೇವ ಭಾಯಿಗೆ ಪ್ರಿಯವಾಗಿದ್ದ ಕವಿ ಬಾಬುಗಳ (ಕವಿ ರವೀಂದ್ರರ) ಗೀತಗಳನ್ನು ಹಾಡುತ್ತ ಆಶ್ರಮದ ಸುತ್ತಮುತ್ತ ಮೆರವಣಿಗೆ ಹೋಗಿ ಬಂದು ಮಹಾದೇವರ ಗುಡಿಸಲ ಮುಂದೆ ನಿಂತು ಕೊನೆಯ ಪಲ್ಲವಿ ಹಾಡಿದ ನಂತರ ಚದರಿದರು. ಹಸ್ತಲೇಖನದ ಮಾದರಿಗಳ ಪ್ರದರ್ಶನವೊಂದು, ಸಾಮೂಹಿಕ ಸೂತ್ರಯಜ್ಞವೊಂದು ಆ ದಿನದ ಕಾರ್ಯಕ್ರಮದಲ್ಲಿ ಅಗ್ರಪಟ್ಟವನ್ನು ದೊರಕಿಸಿಕೊಂಡಿದ್ದವು. ಮುದ್ದಾದ ಕೈಬರೆಹದಲ್ಲಿ ಅವರೇ ಬರೆದಿದ್ದ ದಿನಚರಿಗಳು, ಪುಸ್ತಕಗಳು, ಪತ್ರಗಳು ಕಣ್ಣಿಗೆ ಹಬ್ಬ ಮಾಡುತ್ತಿದ್ದವು. ಅವರ ಇಂಗ್ಲೀಷ ಲಿಪಿಯಲ್ಲಿ ಬರೆಯಲಿ, ಗುಜರಾಥಿ ಸಂಸ್ಕೃತ ಅಥವಾ ಪರ್ಶಿಯನ್ ಲಿಪಿಯಲ್ಲಿ ಬರೆಯಲಿ ಅದರಲ್ಲೆಲ್ಲ ತನ್ನದೇ ಒಂದು ಸೊಬಗು ಅಂಕಿತವಾಗಿರುತಿತ್ತು. ಕಾಂಗ್ರೆಸ್ಸಿನ ಜಗತ್ಪ್ರಸಿದ್ಧ ಮುಂದಾಳುಗಳ ಅಂತೆಯೆ ಮಹಾದೇವರ ಕೈಬರಹದ ಅನುಕರಣ ಮಾಡುವದರಲ್ಲಿ ಹೆಚ್ಚು ಕಡಿಮೆ ಯಶಸ್ವಿಗಳಾದ ಸಾಮಾನ್ಯ ಆಶ್ರಮವಾಸಿಗಳ ಕೈಬರಹದ ಮಾದರಿಗಳೂ—ಮೂಲ ಶಿಕ್ಷಣ ಶಾಲೆಯ ವಿದ್ಯಾರ್ಥಿಗಳ ಪ್ರಯತ್ನಗಳನ್ನಂತೂ ಹೇಳಲೇಬೇಡ—ಪ್ರದರ್ಶನಕ್ಕೆ ಪರಿಪೂರ್ಣತೆಯನ್ನು ತಂದುಕೊಟ್ಟಿದ್ದವು.

ಗಾಂಧೀಜಿಗೆ ಚಿಕ್ಕ ಸಂಗತಿಗಳ ಮೇಲೆ ಪ್ರೀತಿ ಬಹಳ. ಅವುಗಳಿಂದಲೇ ತಮ್ಮ ಜೀವನ ರಚಿಸಲ್ಪಟ್ಟದೆಯೆಂದು ಅವರು ಎಷ್ಟೋ ಸಲ ಅಂದಿದ್ದಾರೆ. ೧೫ ನೆ ತಾರೀಕು ಸಂಜೆಯ ಪ್ರಾರ್ಥನಾ ಸಭೆಯಲ್ಲಿ ಅವರು ಮಹಾದೇವರ ಜೀವನದ ಮೂರು ಚಿಟ್ಟುಗಳನ್ನು ಸಭಿಕರ ಗಮನಕ್ಕೆ ತರುತ್ತ ನುಡಿದುದು: "ಮಹಾದೇವ ದೇಸಾಯಿಯ ಗೆಳೆಯರೂ ಪ್ರಶಂಸಕರೂ ಅವನ ತಿಥಿಯನ್ನು ಅವನಿಗೆ ಪ್ರಿಯವಾಗಿದ್ದ ಕೆಲಸಗಳಲ್ಲಿ ಕಾಲಕ್ಷೇಪಮಾಡುವ ಮೂಲಕ ಆಚರಿಸುವ ಪಾಠವನ್ನಿಟ್ಟುಕೊಂಡಿದ್ದಾರೆ. ಅವರ ಕೈ ಬಹಳ ಕಲಾಪಾರಂಗತವಾಗಿತ್ತು. ಅವರಿಗೆ ಪ್ರಿಯವಾದ ವಸ್ತುಗಳು ಹಲವಿದ್ದವು. ಅವುಗಳಲ್ಲಿ ರಾಟಿಗೆ ಮೊದಲನೇ ಸ್ಥಾನವಿತ್ತು. ಕಲಾಕಾರನಂತೆ ಸಪ್ಪದ ಅತ್ಯಂತ ಸುಂದರವಾಗಿ ಅವರು ನೂಲು ತೆಗೆಯುತ್ತಿದ್ದರು. ಎಷ್ಟೇ ಬಳಲಿರಲಿ, ಎಷ್ಟೇ ಕಾರ್ಯಭಾರವಿರಲಿ ಅವನು ನೂಲಲು ಹೇಗಾದರೂ ಅವಕಾಶ ಮಾಡಿಕೊಳ್ಳುತಿದ್ದರು. ಅದರಿಂದ ಅವರ ಶ್ರಮ ಪರಿಹಾರವಾಗುತಿತ್ತು.

"ಅವರು ಕೈಗೂಡಿಸಿಕೊಂಡಿದ್ದ ಅನೇಕ ಕೌಶಲಗಳಲ್ಲಿ ಅನಿಂದ್ಯ ಸುಂದರವಾದ ಕೈಬರೆಹವೂ ಒಂದಾಗಿತ್ತು. ಆದರಲ್ಲಿ ಅವರು ಸಿದ್ಧಹಸ್ತರಾಗಿದ್ದರು. ರಾಮದಾಸ ಸ್ವಾಮಿಗಳು ತಮ್ಮ ದ್ವಿಪದಿಯೊಂದರಲ್ಲಿ, ಸೊಗಸಾದ ಕೈಬರಹವನ್ನು ಉಜ್ವಲ ರತ್ನಕ್ಕೆ ಹೋಲಿಸಿದ್ದಾರೆ. ಮಹಾದೇವರು ಬರೆದರೆಂದರೆ ಅಕ್ಷರ ಅಣಿಮುತ್ತಿನಂತಿರುತಿತ್ತು.

ಎಲ್ಲರೂ ಅನುಕರಿಸಬೇಕಾದ ಅವನು ಇನ್ನೊಂದು ಗುಣವೆಂದರೆ ಭಾರತೀಯ ಭಾಷೆಗಳಲ್ಲಿ ಅವರಿಗಿದ್ದ ಪ್ರೇಮ. ಅವರು ಬಹು ಭಾಷಾಭಿಜ್ಞರಾಗಿದ್ದರು. ಬಂಗಾಲಿ, ಮರಾಠಿ, ಹಿಂದೀಗಳಲ್ಲಿ ಅವನು ಪ್ರಭುತ್ವವನ್ನು ಗಳಿಸಿದ್ದನು; ಉರ್ದುವನ್ನೂ ಕಲಿಯುತ್ತಿದ್ದನು. ಸೆರೆಮನೆಯಲ್ಲಿ ಸಹಬಂಧಿಸಲಾಗಿದ್ದ ಖ್ವಾಜಾ ಸಾಹೇಬ ಎಂ. ಎ. ಮಜೀದರಿಂದ ಪರ್ಶಿಯನ್ ಮತ್ತು ಅರಬ್ಬಿ ಭಾಷೆಗಳನ್ನೂ ಕೂಡ ಕಲಿಯಲು ಪ್ರಯತ್ನಿಸಿದನು.

ರವಿ ಬಾಬುಗಳ ಹಾಡೊಂದು ಹಾಡಲ್ಪಟ್ಟಿತ್ತು. ಅದನ್ನು ಕುರಿತು ಗಾಂಧೀಜಿ ಪ್ರಸ್ತಾವಿಸಿದ್ದು: "ಇದೀಗ ನೀವು ಹಾಡಿದ್ದು ಮಹಾದೇವನ ಮಮತೆಯ ಗೀತಗಳಲ್ಲೊಂದಾಗಿತ್ತು. ಅದನ್ನು ಅವನು ಗುಜರಾಥಿಗೂ ಪದ್ಯರೂಪದಲ್ಲಿ ಅನುವಾದಿಸಿದನು

"ಹೃದಯ ಕಾಯ್ದು ಕಠಿನವಾಗೆ,
ದಯೆಯ ಮಳೆಯ ಕೊಂಡು ಬಾ
ಬಾಳ ಸೊಬಗು ಮಾಯವಾಗೆ,
ಗಾನಲಹರಿಯೊಂದ ಬಾ
ಕಾಯಕಗಳ ಘೋರ ನಾದ
ನನ್ನ ಮುತ್ತಿ ಮುಚ್ಚಿದಾಗ
ಓ ಓ ನೀರವದ ರಾಜ
ನಿನ್ನ ಶಾಂತಿ ವಿಶ್ರಾಂತಿ ತಾ.
ಎನ್ನೀ ಕಂಗಾಲ ಹೃದಯ
ಮುದುರಿ ಮೂಲೆ ಹಿಡಿದಿರೆ
ರಾಜ ಸಮಾರೋಹದೊಡನೆ
ಬಾ, ಬಾಗಿಲನೊಡೆದರೆ
ಮಾಯೆಧೂಳನೆರಚಿ ಬಯಕೆ,
ಮನದ ಕಣ್ಣ ಮಂಜು ಮುಸುಕೆ,
ಓ ಪವಿತ್ರ, ಓ ಜಾಗ್ರತ,
ನಿನ್ನ ಮಿಂಚ ಸಿಡಿಲ ತಾ.
—ಗೀತಾಂಜಲಿ

"ಇದು ದಿವಂಗತರ ಹೃದಯದ ಅಂತರತಮ ಅಭಿಲಾಷೆಯನ್ನು ಶಬ್ದಗಳಿಗಿಳಿಸಿದೆ ಮಹಾದೇವನ ಜೀವನ ಅಕ್ಷಯ ಸದ್ಗುಣಗಳ ಖನಿಯಾಗಿತ್ತು. ನೀವೆಲ್ಲರೂ ಅದರಲ್ಲಿ ಪಾಲುಗಾರರಾಗಬಹುದು. ನೀವು ಪಾಲುಗೊಂಡದ್ದರಿಂದ ಅದು ಕ್ಷಯ ಹೊಂದುವದಿಲ್ಲ. ಅದೀಗ ಆಧ್ಯಾತ್ಮಿಕ ಖನಿಗಳ ಮಹಿಮೆ.

ಓಂ ಪೂರ್ಣಮದಃ ಪೂರ್ಣಮಿದಂ
ಪೂರ್ಣಾತ್ ಪೂರ್ಣಮುದಚ್ಯತೇ
ಪೂರ್ಣಸ್ಯ ಪೂರ್ಣಮಾದಾಯ
ಪೂರ್ಣಮೇವಾವಶಿಷ್ಯತೇ ॥

## ಸೇವಾಗ್ರಾಮದಲ್ಲಿ ಪಂಡಿತ ನೆಹರು

ಕಾರ್ಯ ಸಮಿತಿಯ ಸಭೆಗಾಗಿ ವರ್ಧಾದಲ್ಲಿ ಜವಾಹರಲಾಲರು ಉಪಸ್ಥಿತರಾಗಿದ್ದುದರ ಉಪಯೋಗವನ್ನು ಪಡೆದು, ಸೇವಾಗ್ರಾಮದ ಸಂಸ್ಥೆಗಳು ಅವರನ್ನು ಸೇವಾಗ್ರಾಮ ಆಶ್ರಮದಲ್ಲಿ ರವಿ ಭವನ ಎಂದು ಪ್ರಸಿದ್ಧವಾದ ನಯೀ ತಾಲಿಮಿ ಸಂಘದ ಭವನದಲ್ಲಿ ತಮಗೆ ಭಾಷಣವೀಯಲು ಕರೆದಿದ್ದವು ಖಾದಿ ವಿದ್ಯಾಲಯ, ಹಿಂದುಸ್ತಾನಿ ತಾಲಿಮಿ ಸಂಘ, ಗೋಸೇವಾ ಸಂಘ, ಮತ್ತು ಕಸ್ತೂರಬಾ ಸ್ಮಾರಕ ಯೋಜನೆಯನ್ವಯ ತರಬೇತಿ ಪಡೆಯುತಿರುವ ಶಿಕ್ಷಕರು ಈ ಸಂದರ್ಭದಲ್ಲಿ ಭಾಗ ವಹಿಸಿದ್ದರು. ಪಂಡಿತಜಿಯವರು ಒಂದು ಚುಟುಕಾದರೂ ಉಜ್ವಲವಾಗಿದ್ದ ಭಾಷಣ ಮಾಡಿ, ತಾವು ಹಿಂದಿನ ಬಾರಿ ಸೇವಾಗ್ರಾಮಕ್ಕೆ ಭೆಟ್ಟಿ ಕೊಟ್ಟಂದಿನಿಂದ ಅದು ಬೆಳೆದ ಪ್ರಮಾಣದ ಬಗೆಗೆ ಬಹಳ ಸಂತೋಷವನ್ನು ವ್ಯಕ್ತಗೊಳಿಸಿದರು. ಹಿಂದೆ ಬರಿ ಅಲ್ಲೊಂದು ಇಲ್ಲೊಂದು ಗುಡಿಸಲು ಇದ್ದ ಸ್ಥಳದಲ್ಲಿ ಇಂದು ವಿಧಾಯಕ ಚಟುವಟಿಕೆಯ ಸಂಘ ಸಂಸ್ಥೆಗಳ ಒಂದು ಗುಜುಗುಜು ಜೇನುಹುಟ್ಟೇ ಉಂಟಾಗಿಬಿಟ್ಟಿದೆ. ಇಲ್ಲಿಗೆ ತರಬೇತಿಗಾಗಿ ಬಂದಿರುವವರು ತಂತಮ್ಮ ಕಾರ್ಯಕ್ಷೇತ್ರಗಳಿಗೆ ಮರಳಿದಾಗ ಅವರಿಗಾಗಿ ಪ್ರಚಂಡ ಕಾರ್ಯಗಳು ಕಾದಿವೆ. ೪೦ ಕೋಟಿ ಸ್ತ್ರೀ-ಪುರುಷ—ಶಿಶುಗಳ ಏಟ್ಟವನ್ನು ಏರಿಸುವದು ಚಿನ್ನಾಟದ ಮಾತಲ್ಲ ಪತ್ರಿಕೆಗಳು ಈಚೀಚೆಗೆ ರಾಜಕಾರಣದಿಂದ ತುಂಬಿ ತುಳುಕುತಿವೆ. ಆದರೆ ರಾಜಕೀಯ ಸ್ವಾತಂತ್ರ್ಯವೆಂಬುದು ವಿಧಾಯಕ ಕಾರ್ಯದ ದಾರಿಯನ್ನು ನಿರಾತಂಕವಾಗಿ ಮಾತ್ರ ಮಾಡುತ್ತದೆಯೇ ಬುದನ್ನು ನಾವು ಮರೆಯತಕ್ಕದ್ದಲ್ಲ. ಅದು ವಿಧಾಯಕ ಕಾರ್ಯದ ಸ್ಥಾನವನ್ನು ನಿರ್ವಹಿಸಲಾರದು. "ಇಂಗ್ಲೀಷರನ್ನು ನಮ್ಮ ದೇಶದಿಂದ ಹೊರಗೆ ಅಟ್ಟುವದರಲ್ಲಿ ನಾವು ಯಶಸ್ವಿಗಳಾಗಿಯೂ ಜನರ ಸ್ಥಿತಿಗತಿ ಇದ್ದಂತೆಯೆ ಉಳಿದರೆ ನಾವು ಇಷ್ಟೆಲ್ಲ ಮಾಡಿ ಇನ್ನಷ್ಟು ದುಃಸ್ಥಿತಿಯನ್ನು ಎರವು ತಂದಂತಾದೀತು. ರಾಷ್ಟ್ರೀಯ ನಿರ್ಮಾಣಕ್ಕೆ ಅಡ್ಡಿಯಾಗಿದ್ದ ತೊಡಕುಗಳನ್ನು ನಿವಾರಿಸುವದು ಮಾತ್ರ ರಾಜಕೀಯ ಸ್ವಾತಂತ್ರ್ಯದ ಕೆಲಸ. ನಿಜವಾದ ಕೆಲಸ ಆಗ ತಾನೆ ಪ್ರಾರಂಭವಾಗುವದು. ನಮ್ಮ ಜನತೆಯನ್ನು ಪೀಡಿಸುತಿರುವ ಬಡತನ, ನಿರುದ್ಯೋಗಗಳನ್ನು ನಿವಾರಿಸಿ ಅವರ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸುವ ನಮ್ಮ ಕರ್ತವ್ಯ"

"ಸಂಪತ್ತಿಯೆಂದರೇನು ?" ಪಂಡಿತಜಿಯವರು ಪ್ರಶ್ನಿಸಿ ತಾವೇ ಉತ್ತರವಿತ್ತರು. " ಅದು ಚಿನ್ನವೂ ಅಲ್ಲ, ಬೆಳ್ಳಿಯೂ ಅಲ್ಲ. ಮರುಳುಗಾಡಿನಲ್ಲಿ ದಾರಿ ತಪ್ಪಿದ ದಾರಿಗನು ಜಗತ್ತಿನಲ್ಲಿರುವ ಎಲ್ಲ ಚಿನ್ನ ಬೆಳ್ಳಿಗಳನ್ನು ಕೊಟ್ಟು ಜೀವಉಳಿಸಿಕೊಳ್ಳಲು ಒಂದು ಹಿಡಿ ಅನ್ನ, ಒಂದು ಗುಟುಕು ನೀರು ಪಡೆಯಲು ಸಂತೋಷದಿಂದ ಒಪ್ಪಬಹುದು. ಚಿನ್ನ ಬೆಳ್ಳಿಗಳು ಉಪಯುಕ್ತ ಪದಾರ್ಥಗಳ ವಿನಿಮಯಕ್ಕೊಂದು ಅನುಕೂಲ ಮಾಧ್ಯಮ ಮಾತ್ರ. ಒಂದು ರಾಷ್ಟ್ರದ ಸಂಪತ್ತಿಯನ್ನು ಅದರ ಹತ್ತರ ಇರುವ ಅಮೂಲ್ಯ ಲೋಹಗಳ ತುಣುಕುಗಳಿಂದ ಅಳೆಯುವದಿಲ್ಲ; ಅದರ ಕೈಲಿರುವ ಉಪಯುಕ್ತ ವಸ್ತುಗಳ ಮತ್ತು ಅವುಗಳನ್ನು ಉತ್ಪಾದಿಸುವ ಅದರ ಶಕ್ತಿಯ ಮಾನದಿಂದ. ಉಪಯುಕ್ತ ವಸ್ತುಗಳನ್ನು ಹುಟ್ಟಿಸುವ ಚಾತುರ್ಯ ಕೌಶಲಗಳುಳ್ಳ ದೃಢಕಾಯರೂ ಕಾರ್ಯತತ್ಪರರೂ ಆದ ಪ್ರಜೆಗಳಿಂದ ಕೂಡಿದ ರಾಷ್ಟ್ರ, ಅದರ ಕೈಯಲ್ಲಿ ಒಂದು ತೊಲೆ ಚಿನ್ನಬೆಳ್ಳಿ ಇಲ್ಲದಿದ್ದರೆ ಕೂಡ, ಸಂಪನ್ನ ರಾಷ್ಟ್ರವೇ ಸರಿ. ಬದಲಿಗೆ ಬೇಕಾದಷ್ಟು ಚಿನ್ನಬೆಳ್ಳಿಗಳನ್ನು ಕೂಡಹಾಕಿದ್ದರೂ ಯಾವ ರಾಷ್ಟ್ರದಲ್ಲಿ ಈ ಸಾಧನವಿಲ್ಲವೋ ಅದು ಬಡ ರಾಷ್ಟ್ರವೇ. 'ಏನನ್ನೂ ಉತ್ಪಾದಿಸದೆ ಬರಿ ಕರಗಿಸುವವನು ಅನ್ಯರ ಪರಿಶ್ರಮದ ಫಲವನ್ನುಣ್ಣುವ ಪರೋಪಜೀವಿ; ಅವನು ಸಮಾಜಕ್ಕೊಂದು ಹೊರೆ.

"ಇಂದು ಒಂದು ಕಡೆ ಏನೂ ಕೆಲಸ ಮಾಡದ ಸೋಮಾರಿ ಶ್ರೀಮಂತರಿದ್ದರೆ ಇನ್ನೊಂದೆಡೆ ಕೆಲಸ ಸಿಗದ ಕಾರಣದಿಂದ ಉಪವಾಸಬೀಳಬೇಕಾದ ಬಡ ದುಡಿಮೆಗಾರರನ್ನು ಕಾಣುತ್ತೇನೆ. ಹಿಂದುಸ್ತಾನ ಸ್ವತಂತ್ರವಾಗಿದ್ದಾಗ ಉಚ್ಛ್ರಾಯದಲ್ಲಿದ್ದ ಅನೇಕಾನೇಕ ಕಲೆ-ಕೈಗಾರಿಕೆಗಳು ಕೊಲ್ಲಲ್ಪಟ್ಟದ್ದರಿಂದ ದೇಶದಲ್ಲಿ ಪದೇ ಪದೇ ಬರಗಾಲ ಬಿದ್ದು ಅದಿಂದು ಬಳಲಿ ಬಸವಳಿದುಹೋಗಿದೆ. ಇದು ನಮ್ಮ ಸದ್ಯದ ಪಾಡು. ಇದನ್ನು ನಿವಾರಿಸಬೇಕಾಗಿದೆ. ಒಬ್ಬನೇ ಒಬ್ಬ ಮನುಷ್ಯನಿಗಾದರೂ ಉದ್ಯೋಗ ಅಥವಾ ಜೀವನೋಪಾಯವಿಲ್ಲದಿರಕೂಡದು. ಎಲ್ಲರಿಗೂ ಬೆಳೆಯಲು, ಉನ್ನತಿಗೆ ಬರಲು ಸಮಾನ ಸಂಧಿ-ಸಂದರ್ಭಗಳಿರಬೇಕು. ಒಂದು ರೀತಿಯಲ್ಲಿ ಎಲ್ಲ ಜನರೂ ಸಮಾನರಲ್ಲ—ಕೆಲವರು ಬುದ್ಧಿವಂತರು,ಕೆಲವರು ದಡ್ಡರು, ಕೆಲವರು ದುರ್ಬಲರು ಉಳಿದವರು ಬಲಿಷ್ಠರು ಇರುವರು. ಆದರೆ ತನ್ನ ಕೌಶಲವನ್ನು ಬೆಳಸಿಕೊಳ್ಳಲು ಅವನಿಗೆ ಅವಕಾಶವೇ ಇಲ್ಲದಿರುವಾಗ ಯಾರನ್ನಾದರೂ ಅಕೌಶಲಕ್ಕಾಗಿ ತೆಗಳಿ ಫಲವಿಲ್ಲ ಬಡ, ನಿರಕ್ಷರ, ಅರ್ಧೋಪವಾಸಿ ಹಳ್ಳಿಗನೊಬ್ಬನ ಶಿಕ್ಷಣ ವಿಕಾಸಗಳಿಗೆ ಬೇಕಾದಷ್ಟು ಅವಕಾಶವಿರುವ ಸುಪುಷ್ಟ ಮನುಷ್ಯನಷ್ಟೇ ಸಾಮರ್ಥ್ಯವನ್ನು ಪ್ರದರ್ಶಿಸಬೇಕೆಂದು ಹೇಗೆ ನಿರೀಕ್ಷಿಸೋಣ? ಎಲ್ಲ ಮನುಷ್ಯರೂ ಎಲ್ಲ ಬಗೆಯಲ್ಲಿಯೂ ಸಮಾನರಾಗಿರುವದು ಅವಶ್ಯವಿಲ್ಲ. ಆದರೆ ಎಲ್ಲರಿಗೂ ಜೀವನದಲ್ಲಿ ಸಮಾನ ಅವಕಾಶ ಮಾತ್ರ ಇರಬೇಕು. ಹಾಗಿದ್ದರೆ ಮಾತ್ರ ಯೋಗ್ಯತೆಯ ನ್ಯಾಯ್ಯವಾದ ಅಳವು ಸಿಕ್ಕಬಹುದು."

ಭಾಷಣಕಾರರು ಮುಂದೆ ಸಾಗುತ್ತ ಹಣಗಳಿಸುವ ಚಾತುರ್ಯವೊಂದೇ ಯೋಗ್ಯತೆಯ ಪಡಿಯಲ್ಲವೆಂದರು. ಇತರರನ್ನು ಶೋಷಿಸಿ, ಹಾನಿಯೊದಗಿಸಿ ಯಾವನೊಬ್ಬನು ಶೇಖರಿಸಿದ ಹಣದ ಚೀಲ ದೇಶದ ಸಂಪತ್ತಿಯೆನಿಸಲಾರದು ಆದರೆ ಯಾವಾತನು ಉಪಯುಕ್ತವಾದ ಯಾವವೇ ಪದಾರ್ಥವನ್ನು ಅದು ಎಷ್ಟೇ ಸಾಮಾನ್ಯವಾದುದಿರಲಿ—ಎಂದರೆ ಒಂದು ಮೇಜನ್ನೋ ಕುರ್ಚಿಯನ್ನೋ ಇರಬಹುದು — ತಯಾರಿಸುವನೋ ಅವನು ದೇಶದ ಸಂಪತ್ತಿಯನ್ನು ಬೆಳೆಸುತ್ತಾನೆ. ವಿದ್ವತ್ತೆಗೆ ಅತಿರೇಕ ಮಹತ್ವವನ್ನು ಕೊಡುವದು ಈಚೆಗೆ ಒಂದು ಚಟದಂತಾಗಿಬಿಟ್ಟಿದೆ. ನಮ್ಮಲ್ಲಿ ಇಂದಿನ ಮತ್ತು ಹಿಂದಿನ ಸಾರ್ವಜನಿಕ ನಾಯಕರಲ್ಲಿ ಅನೇಕರು ವಕೀಲವರ್ಗದಿಂದ ಬಂದವರೆಂಬ ಮಾತು ನಿಜ. ಆದರೆ ಸ್ವರಾಜ್ಯವನ್ನು ಕೇವಲ ವಿದ್ವತ್ತೆಯ ಸಹಾಯದಿಂದ ಸಾಗಿಸಬಹುದೆಂದು ಬಗೆಯುವದು ದೊಡ್ಡ ತಪ್ಪು. ಎಲ್ಲರೂ ಕಾಯದೆಯ ಅಧ್ಯಯನವನ್ನೇ ಕೈಕೊಂಡರೆ ದೇಶದ ಪಾಡು ಕೆಟ್ಟೀತು. ಒಬ್ಬನೂ ವಕೀಲನಿಲ್ಲದೆ ದೇಶ ಒಂದೊನ್ನೆ ಸಾಗೀತು. ಆದರೆ ಎಲ್ಲ ಧಂಗಿಗಳೂ ಒಂದೇ ಒಂದು ದಿನ ಮುಷ್ಕರ ಹೂಡಿದರೆ ಪ್ರಚಂಡ ದಿಕ್ಕೆಟ್ಟು ಉತ್ಪನ್ನವಾಗುವದು. ಹೀಗಿದ್ದರೂ ಸಮಾಜದ ಈ ಅತ್ಯಂತ ಉಪಯೋಗಿ ಸದಸ್ಯನನ್ನು ಹೊಲೆಯನೆಂದು, ನೀಚ ಜೀವಿಯೆಂದು ತಳ್ಳಿ ಬಿಡಲಾಗಿದೆ. "ಹೀಗಿದೆ ನಮ್ಮ ವಿಕೃತಬುದ್ಧಿ. ಹಳ್ಳಿಗಳಲ್ಲಿರುವ ಜನರ ಸೇವೆ ಮಾಡಲು ಹಿಂದುಸ್ಥಾನಕ್ಕೆ ತರಬೇತಿ ಹೊಂದಿದ ಶಾಸ್ತ್ರಜ್ಞರ, ಶಿಲ್ಪಿ, ಕೈಗಾರಿಕೆಗಾರರ ಯಂತ್ರಜ್ಞ, ವೈದ್ಯರ ಒಂದು ದಂಡೇ ಬೇಕಾಗುವದು. ನಾವು ಅವರನ್ನು ತರಬೇತಿಗೊಳಿಸಲೇ ಬೇಕಾಗುವದು. ಇಲ್ಲಿ ನಡೆಯುತಿರುವದು ಅದೇ. ಈ ಕೆಲಸ ಅತ್ಯಂತ ಮಹತ್ವದ್ದೆಂದು ನನ್ನೆಣಿಕೆ. ಮೇಲಿನ ಕೆಲ ವಿಭೂತಿಗಳಿಂದಲೇ ರಾಷ್ಟ್ರದ ನಿರ್ಮಾಣವಾಗುವದಿಲ್ಲ. ಇಡಿ ಜನರಾಶಿಯ ಮಟ್ಟವನ್ನು ಏರಿಸುವದರಿಂದಲೆ ಅದು ಆಗಬೇಕು. ಕೆಳಗಿರುವ ತಳಕಟ್ಟು ಬಲಿಷ್ಠವೂ ಭದ್ರವೂ ಆಗಿದ್ದರೆ ಪ್ರಚಂಡ ವಿಭೂತಿಗಳು ಇಲ್ಲದೆ ಹೋದರೂ ಪರವಿಲ್ಲ ಅದುದರಿಂದ ತಳಕಟ್ಟನ್ನು ಬಲಗೊಳಿಸುವದರ ಮಹತ್ವ ಎಲ್ಲಕ್ಕೂ ಹಿರಿದು. ಜನತೆಯ ಮಟ್ಟವನ್ನು ಏರಿಸುವದರಲ್ಲಿ ಗಾಂಧೀಜಿ ಎಲ್ಲರಿಗಿಂತಲೂ ಹೆಚ್ಚು ದುಡಿದಿದ್ದಾರೆ. ಆದರೆ ಈ ದಿಸೆಯಲ್ಲಿ ಸಾಧಿಸಬೇಕಾದುದು ಇನ್ನೂ ಬಹಳ ಇದೆ. ಇಂದಿನ ವಿದ್ಯಾರ್ಥಿಗಳು ನಾಳಿನ ಶಿಕ್ಷಕರು. ಅವರ ತರಬೇತಿಯನ್ನು ಉಪೇಕ್ಷಿಸಿದರೆ ಅಥವಾ ಅದು ಯಾವ ರೀತಿಯಲ್ಲಾದರೂ ಸದೋಷವಾಗಿದ್ದರೆ ಸ್ವರಾಜ್ಯದ ತಳಕಟ್ಟು ದುರ್ಬಲವಾಗುವದು. ಅದುದರಿಂದ ಇಂದು ಇಲ್ಲಿ ನಡೆಯುತಿರುವ ಕೆಲಸ ತೋರಿಕೆಗೆ ಅಷ್ಟು ಉತ್ತೇಜಕವಾಗಿ ಆಕರ್ಷಕವಾಗದಿರಬಹುದಾದರೂ ಅತ್ಯಂತ ಮಹತ್ವದ್ದು. ಅದುದರಿಂದ ನೀವು ಇಷ್ಟೆಲ್ಲ ಜನರು ಬರಲಿರುವ ಸ್ವರಾಜ್ಯದ ತಳಕಟ್ಟನ್ನು ಭದ್ರವಾಗಿ ಮಾಡುವದರಲ್ಲಿ ನಿರತರಾಗಿರುವದನ್ನು ನೋಡಿ ನನಗೆ ಆನಂದವಾಗಿದೆ. "

ಸೇವಾಗ್ರಾಮ — ಪ್ಯಾರೇಲಾಲ
೨೯—೮—೪೬

---

## ಖಾದಿಯ ಪರೀಕ್ಷಾ ಕಾಲ

(೬ನೇ ಪುಟದಿಂದ ಮುಂದರಿದುದು)

ಗೊತ್ತಿದೆ" ಎಂದು ಗೆಳೆಯ ಕೊನೆಯಲ್ಲಿ ಒತ್ತಾಯದಿಂದ ಹೇಳಿದನು.

## ವಿಶ್ವಾಸದ ಮರಣಶಾಸನ

"ಗಂಡಾಂತರದ ಬಗ್ಗೆ ಮಾತ್ರ ನಾನು ಎಚ್ಚರಿಕಬಲ್ಲೆ. ನೂಲುವದಕ್ಕಾಗಿ ಗಿರಣಿ ಹಂಜಿಗಳನ್ನು ನಾವು ಉಪಯೋಗಿಸುವ ಕಾಲವೊಂದಿತ್ತು. ಗಿರಣಿ ನೂಲನ್ನೂ ನಾವು ಉಪಯೋಗಿಸಬಹುದಾಗಿತ್ತು. ಗಿರಣಿ ಹಂಜಿಗಳನ್ನು ಬಿಟ್ಟುಗೊಟ್ಟು ನಾವು ಕೈಯಿಂದ ಸಂಜಿ ಹಾಕಿಕೊಳ್ಳುವದನ್ನು ಪ್ರಾರಂಭಿಸಿರದಿದ್ದರೆ ಇಷ್ಟೊತ್ತಿಗೆ ಖಾದಿಯ ಹೆಸರೇ ಉಳಿಯುತಿರಲಿಲ್ಲ. ದಿವಂಗತ ಸರ್ ಗಂಗಾರಾಮರು ರಾಟಿಯನ್ನು ಬಿಟ್ಟುಗೊಟ್ಟು ಕೇವಲ ಕೈಮಗ್ಗದ ಕೈವಾರಿಗಳಾಗಿರಿ;ನಾನೂ ನಿಮ್ಮನ್ನನುಸರಿಸುತ್ತೇನೆ" ಎಂದು ಹೇಳಿದರು. ಕೈಮಗ್ಗದ ಉದ್ಯೋಗದಲ್ಲಿ ಗಿರಣಿ ನೂಲಿನ ಉಪಯೋಗವೆ ಅದರ ನಾಶದ ಮುಖ್ಯ ಸಾಧನವೆಂದು ಇಂದು ನಾವು ತಿಳಿಯುತಿದ್ದುದು ಅವರಿಗೆ ಗೊತ್ತಿರಲಿಲ್ಲ. ಕೈನೂಲಿನಲ್ಲಿಯೇ ಅದರ ಮೋಕ್ಷ. ಇಂದು ರಾಟಿ ಮಾಯವಾದರೆ ಕೈಮಗ್ಗಗಳೂ ಅದೇ ದಾರಿ ಹಿಡಿಯುವದು ಖಂಡಿತ. ಕೊಟ್ಟವಧಿ ಜನರು ಅದರಲ್ಲಿ ಕೈಕೊಡಗದಿದ್ದರೆ ನನ್ನ ದೃಷ್ಟಿಯಲ್ಲಿ ಖಾದಿಗೆ ಏನೂ ಮಹತ್ವವಿಲ್ಲ. ಈ ಸಂದರ್ಭದಲ್ಲಿ ಸೂಚಿಸಲ್ಪಟ್ಟ ಒಡಂಬಡಿಕೆಯ ಕರಾರುಗಳಿಂದ ಅದರ ಮುಖ್ಯ ಸ್ವರೂಪವೇ ಬದಲಾಗುವದು. ೩೦ ವರ್ಷಗಳ ಹಿಂದೆ ನಾನು ದಿವಂಗತ ಸರ್ ಫಜಲ್‌ಭಾಯಿಯವರನ್ನು ಕಂಡಾಗ ಅವರು ಕೊನೆಯಲ್ಲಿ ಖಾದಿಯು ಅಯಶಸ್ವಿಯಾಗತಕ್ಕದ್ದೆ ಎಂದು ಭವಿಷ್ಯ ನುಡಿದಿದ್ದರು. ಅವರು ದಿವಂಗತರಾದರು ಆದರೆ ಖಾದಿಯಿನ್ನೂ ಜೀವಂತವಿದೆ. ಅದರಲ್ಲಿ ಹೊಸಮನ್ವಂತರವುಂಟಾಗಿರಬಹುದು ಮತ್ತು ಅದರಲ್ಲಿ ಖಾದಿಯು ಅಕಾಲಿಕವೆನಿಸಬಹುದು. ಆದರೆ ನನಗೆ ಮಾತ್ರ ಹಾಗೆನಿಸುವದಿಲ್ಲ.

ಸೇವಾಗ್ರಾಮ — ಪ್ಯಾರೇಲಾಲ
೧೨—೮—೧೯೪೬

## ಖಾದಿಗೆ ಅವಿಧೇಯತೆ

ಒಬ್ಬ ಪತ್ರಲೇಖಕನು ಬರೆಯುತ್ತಾನೆ.

"ಜುಲೈ ೨೧, ೧೯೪೬ ದಿನ ಸಂಜೆ ೬ ಗಂಟೆ ಹೊತ್ತಿಗೆ ೧೩ ಜನ ಖಾದಿ ಧಾರಿಗಳಾದ ಕಾಲೇಜ ವಿದ್ಯಾರ್ಥಿಗಳು ಖಾದೀ ಭಂಡಾರದಲ್ಲಿ ನುಗ್ಗಿದರು. ಅವರಿಗೆ ಪ್ರಮುಖ ಕಾಂಗ್ರೆಸ್ಸಿಗನೊಬ್ಬನು ಮುಂದಾಳಾಗಿದ್ದನು. ಈ ಮನುಷ್ಯ ಕೌನ್ಸಿಲ ಸದಸ್ಯನೂ ಹೌದು. ಖಾದಿಯ ಕೊರತೆಯ ಕಾರಣದಿಂದ ಭಂಡಾರದಲ್ಲಿ ಮಾರಾಟ ನಿಲ್ಲಿಸಲ್ಪಟ್ಟಿತ್ತು. ೧೫೦೦ ಖಾದೀಧಾರಿಗಳ ಬೇಡಿಕೆಯನ್ನು ಪೂರೈಸಲು ಇಷ್ಟೊಂದು ಖಾದಿ ಸಾಲದೆಂದು ಕೆಲ ಖಾದಿ ಥಾನುಗಳು ಪಾತ್ರ ಮುಹಡಿಯಲ್ಲಿದ್ದ ಕಪಾಟಿನಲ್ಲಿ ಇರಿಸಲ್ಪಟ್ಟಿದ್ದವು. ಬಂದವರು ಮುಹಡಿಯನ್ನೇರಿ ೧೩ ಇಡಿ ಥಾನುಗಳನ್ನು ಬಲುವೆಯಿಂದ ತೆಗೆದುಕೊಂಡು, ನೂಲು ಕೂಡ ಕೊಡದೆ, ಹಣ ತೆಗೆದುಕೊಳ್ಳಲು ವ್ಯವಸ್ಥಾಪಕನಿಗೆ ಹೇಳಿದರು. ಅವರ ಕೃತಿಯ ನಿಷೆಧಾರ್ಥ ಹಣವನ್ನು ಸ್ವೀಕರಿಸಲು ಒಪ್ಪಲಿಕ್ಕಾಗಿ ಬಟ್ಟೆಯನ್ನು ಹಿಡಿದು ಕೊಂಡು ನೆಟ್ಟಗೆ ಹೊರಟು ಹೋದರು.

"ಅವರ ವಿರುದ್ಧ ಪೋಲಿಸರಲ್ಲಿ ದೂರಿಡುವದು ವ್ಯವಸ್ಥಾಪಕನ ಕರ್ತವ್ಯವಾಗಿರಲಿಲ್ಲವೆ? ಇಲ್ಲದಿದ್ದರೆ ಅವರು ಅರಿವೆಯನ್ನು ಒಯ್ಯದಂತೆ ತಡೆಯಲು ಅವನು ಯಾವ ಕ್ರಮವನ್ನು ಕೈಕೊಳ್ಳಬೇಕಾಗಿತ್ತು?

ವ್ಯವಸ್ಥಾಪಕನು ತನ್ನ ಪ್ರಾಣವನ್ನು ಗಂಡಾಂತರಕ್ಕೆ ಸಿಲುಕಿಸಿಯಾದರೂ ಅಹಿಂಸಾತ್ಮಕವಾಗಿ ಈ ಸುಲಿಗೆಯನ್ನು ಪ್ರತಿರೋಧಿಸಬೇಕಾಗಿತ್ತು. ಸುಲಿಗೆಯಾದ ವಸ್ತುಗಳನ್ನು ಸ್ವೇಚ್ಛೆಯಿಂದ ಅವರು ತಿರುಗಿ ಕೊಡುವಂತೆ ಮಾಡುವ ಎಲ್ಲ ಉಪಾಯಗಳೂ ವ್ಯರ್ಥವಾದ ಮೇಲೆ ಮಾತ್ರ ಅವನು ತಪ್ಪುಗಾರರ ಮೇಲೆ ದೂರು ಕೊಡುವದು ನ್ಯಾಯವಾದೀತು.

ವಿದ್ಯಾರ್ಥಿಗಳ ಪುಂಡತನ ದಿನ ನಿತ್ಯದ ಸೊಲ್ಲಾಗಿಬಿಟ್ಟಿದೆ. "ಪ್ರಮುಖ ಕಾಂಗ್ರೆಸ್ಸಿಗನೊಬ್ಬನು" ಅವರಿಗೆ ಉತ್ತೇಜನ ಕೊಟ್ಟಿದ್ದರೆ ಅದು ಲಾಂಛನಾಸ್ಪದವೇ ಸರಿ. ಸುಲಿಗೆಯ ಖಾದಿಯನ್ನು ಉಪಯೋಗಿಸುವವರು ಸ್ವರಾಜ್ಯದ ಮೂಲ ತತ್ವಗಳನ್ನು ಕುರಿತು ತಮಗಿರುವ ಅಗಾಧ ಅಜ್ಞಾನವನ್ನು ಪ್ರದರ್ಶಿಸುತ್ತಾರೆ. ಅದು ಖಾದಿಯನ್ನು ಒಂದು ಬಗೆಯ ವಿಡಂಬನೆಯನ್ನಾಗಿ ಮಾಡಿಬಿಡುತ್ತದೆ.

ಸೇವಾಗ್ರಾಮ — ಮೋ. ಕ. ಗಾಂ.
೧೮-೮-೪೬

## ಗೋವಾ

ಶ್ರೀ ಕಾಕೋಡಕರರ ಬಂಧನ, ಕಾರಾಗೃಹವಾಸಗಳನ್ನು ಕುರಿತು ಈ ಕೆಳಗಿನ ತಂತಿಗಳು ಬಂದಿವೆ.

"ಗೋವೆಯಲ್ಲಿ ಈಚೆಗೆ ನಡೆದ ಸತ್ಯಾಗ್ರಹ ಚಳವಳಿಯ ಸಂಬಂಧದಲ್ಲಿ ಪುರುಷೋತ್ತಮ ಕಾಕೋಡಕರರ ಬಂಧನವಾಗಿದೆ. ರಾಜಕೀಯ ಕೈದಿಗಳಾಗಿದ್ದರೂ ಅವರನ್ನು ಗಾಳಿಬೆಳಕಿಲ್ಲದ ಹೊಲಸು ಕೋಣೆಯಲ್ಲಿ, ಕೊಲೆ ಸುಲಿಗೆಗಳಿಗಾಗಿ ವಿಚಾರಣೆಯನ್ನು ಎದುರು ನೋಡುತ್ತಿರುವ ಪಾತಕಿಗಳ ಸಂಗಡ ಇರಿಸಲಾಗಿದೆ. ಅವರಿಗೆ ಒದಗಿಸುತ್ತಿರುವ ಆಹಾರ ಬಹಳ ಸಾಮಾನ್ಯವಾಗಿದ್ದು ಅರೆ ಊಟಕ್ಕೆ ಸಾಲದಷ್ಟಿದೆ. ಅವರು ತಮ್ಮ ಆಹಾರಕ್ಕಾಗಿ ದುಡಿಯಲು ಕೂಡ ಸಿದ್ಧರಾಗಿದ್ದಾರೆ. ತಮ್ಮ ಸಂಗಡ ಅದೇ ಕೋಣೆಯಲ್ಲಿರುವ ಉಳಿದ ದುರ್ದೈವಿ ಕೈದಿಗಳನ್ನೂ ಇದಕ್ಕಿಂತ ಒಳ್ಳೆಯ ರೀತಿಯಲ್ಲಿ ನಡೆಸಿಕೊಳ್ಳಬೇಕೆಂದು ಬಿನ್ನವಿಸಿ ಕೊಂಡರು. ಆಹಾರದ ವಿಷಯಕ್ಕೆ ಅಧಿಕಾರಿಗಳು ಕಿವಿಗೊಡಲಿಲ್ಲ. ಕಳೆದ ಮೂರು ದಿನಗಳಿಂದ ಕಾಕೋಡಕರರು ಉಪವಾಸ ಕೈಕೊಂಡಿದ್ದಾರೆ. ಅಧಿಕಾರಿಗಳ ನಡೆವಳಿಕೆ ಉದ್ಧಟತನದ್ದೂ ರೊಚ್ಚಿಗೆಬ್ಬಿಸುವ ಬಗೆಯುದೂ ಇದೆ."

ಪುರುಷೋತ್ತಮ ಕಾಕೋಡಕರರ ಉಪವಾಸದ ಐದನೆಯ ದಿನವಿದು. ಅವರ ಪ್ರಕೃತಿ ಚಿಂತಾಜನಕವಾಗಿದೆ. ಅವರನ್ನು ಭೆಟ್ಟಿಯಾಗಬರುವವರಿಗೆ ಸಶಸ್ತ್ರ ಬಂದೋಬಸ್ತಿಯೊಡನೆ ಭೆಟ್ಟಿಯಾಗಲೀಯುತ್ತಿದ್ದಾರೆ. ಅಧಿಕಾರಿಗಳು ಯಾವ ಚಿಂತೆಯನ್ನೂ ಹಚ್ಚಿಕೊಂಡಿಲ್ಲ"

ಗೋವೆಯ ಅಧಿಕಾರಿಗಳಲ್ಲಿ ಆರೋಪಿಸಲ್ಪಟ್ಟಿರುವ ಅಪರಾಧಗಳು ನಿಜವಾಗಿದ್ದರೆ ಅವು ಅವರಿಗೆ ಕಲಂಕಪ್ರಾಯವಾಗಿವೆ. ಗೋವೆಯ ಸತ್ಯಾಗ್ರಹಿಗಳು ಎಷ್ಟೇ ಕಠೋರವಾದ ಅಧಿಕಾರಿ ದುರ್ವರ್ತನೆಗೂ ಜಗ್ಗಬಾರದೆಂದು ಹಾರೈಸುತ್ತೇನೆ.

ಉಪವಾಸ ಕೈಕೊಂಡದ್ದರಲ್ಲಿ ಎಷ್ಟು ಮಟ್ಟಿನ ಜಾಣತನವುಂಟೋ ನಾನರಿಯೆ. ಅದು ಇಚ್ಛಿತ ಪರಿಣಾಮವನ್ನು ಉಂಟು ಮಾಡಲೆಂದು ಆಶಿಸುತ್ತೇನೆ. ಹೇಗೇ ಇರಲಿ, ಒಮ್ಮೆ ಕೈಕೊಂಡ ನಂತರ ಅದನ್ನು ಕೊನೆತನಕ ಸಾಧಿಸಲೇಬೇಕು.

ಸೇವಾಗ್ರಾಮ — ಮೋ. ಕ. ಗಾಂ.
೧೮-೮-೪೬

## "ಹರಿಜನರನ್ನು ಮರೆಯದಿರಿ"

ಒಬ್ಬ ಸುದ್ದಿಗಾರ ಬರೆಯುತ್ತಾನೆ.

"ಸ್ವರ್ಗವಾಸಿ ಲೋಕಮಾನ್ಯರು ಪ್ರವರ್ತಿಸಿದ ಶ್ರೀ ಗಣೇಶೋತ್ಸವ ಸಮೀಪಿಸುತಿದೆ; ವಿವಿಧ ಸಂಘ ಸಂಸ್ಥೆಗಳು ಅನೇಕ ಮಂತ್ರಿಗಳನ್ನೂ ಇತರ ಮುಂದಾಳುಗಳನ್ನೂ ಈ ಸಂದರ್ಭದಲ್ಲಿ ಮಾತಾಡಲು ಕರೆಯುವವು. ಅವರಿಗೆ ನನ್ನದೊಂದು ಸೂಚನೆಯಿದೆ: ಹರಿಜನರಿಗೆ ಈ ಉತ್ಸವದಲ್ಲಿ ಭಾಗವಹಿಸಲು ವ್ಯವಸ್ಥಾಪಕರು ಒಪ್ಪಿದರೆ ಮಾತ್ರ ಅವರು ಆಮಂತ್ರಣವನ್ನು ಸ್ವೀಕರಿಸಬೇಕು. ಇದಲ್ಲದೆ ತಾವು ಭಾಷಣ ಕೊಡಲು ಹೋಗುವಾಗ ಕನಿಷ್ಠ ಒಬ್ಬ ಹರಿಜನನ್ನಾದರೂ ಸಂಗಡ ಕರದುಕೊಂಡು ಹೋಗಲು ಮರೆಯಬಾರದು"

ಉಚಿತವಾದ ಸೂಚನೆಯಿದು. ಸವರ್ಣ ಹಿಂದುಗಳು ಅಸ್ಪೃಶ್ಯತೆಯನ್ನು ತೊಡೆದು ಹಾಕ ಬಯಸುತಿರುವದು ವಾಸ್ತವವಾಗಿದ್ದ ಪಕ್ಷದಲ್ಲಿ, ಅವರು ಹರಿಜನರೊಡನೆ ಬಹಿರಂಗವಾಗಿ, ಅದೂ ಹಿಂದೂ ಹಬ್ಬ ಹುಣ್ಣಿವೆಗಳ ಇಂಥ ಸಮಾರಂಭಗಳಲ್ಲಿ, ಹೊಕ್ಕು ಬಳಕೆ ಮಾಡಬೇಕು.

ಸೇವಾಗ್ರಾಮ — ಮೋ. ಕ. ಗಾಂ.
೧೬-೮-೪೬

---

ಪಡುಬಿದ್ರೆಯಲ್ಲಿ ಅಗಸ್ಟ ದಿನಾಚರಣೆ ಅರ್ಮಾದ ಹಿಂದ ಸೈನ್ಯದ ಗೌಸ್ ಖಾನರ ಅಧ್ಯಕ್ಷತೆಯಲ್ಲಿ ನೆರವೇರಿತು. ಜಿಲ್ಹೆಯ ಇತರ ಕಡೆಗಳಲ್ಲಿಯೂ ಅಗಸ್ಟ ೯ ಯಶಸ್ವಿಯಾಗಿ ಆಚರಿಸಲ್ಪಟ್ಟಿತು.





## ಧಾರವಾಡ

ಪ್ರಾಥಮಿಕ ಶಿಕ್ಷಕರ ಸಂಬಳದ ಸಂಬಂಧದಲ್ಲಿ ಸರಕಾರದ ಅಧಿಕೃತ ಪ್ರಕಟನೆ ಹೊರಟ ಬಳಿಕ ಪ್ರಾಥಮಿಕ ಶಿಕ್ಷಕ ಸಂಘದ ಕಾರ್ಯಕಾರೀಮಂಡಳದ ಸಭೆ ಬಹುಶಃ ಪಂಢರಪುರದಲ್ಲಿ ಕರೆಯಲಾಗುವುದು. ದೀಪಾವಳಿ ಬಿಡುವಿನಲ್ಲಿ ಅಹಮ್ಮದನಗರ ಜಿಲ್ಹೆಯಲ್ಲಿ ಮುಖ್ಯ ಅಧಿವೇಶನವನ್ನು ಕರೆಯಲಾಗುವದು.

ಧಾರವಾಡ ವನಿತಾಸೇವಾಸಮಾಜದ ಕಟ್ಟಡ ನಿಧಿಗೆ ಬೇರೆ ಬೇರೆ ಮಹನೀಯರಿಂದ ೮೦೦೦ ರೂಪಾಯಿಗಳು ಕೂಡಿದ್ದು ಹಣ ಕೊಟ್ಟವರಿಗೆಲ್ಲ ಸಮಾಜದವರು ಉಪಕಾರ ಪ್ರದರ್ಶಿಸಿದ್ದಾರೆ.

ಧಾರವಾಡದ ದಕ್ಷಿಣಕ್ಕಿರುವ ಸೋಮೇಶ್ವರದ ಹೊಂಡದಲ್ಲಿ ೧೮ ನೇ ತಾರೀಕು ಮಧ್ಯಾನ್ಹ ಸ್ತ್ರೀಯೊಬ್ಬಳ ಶವ ಸಿಕ್ಕಿದೆ. ಆದು ಹುಬ್ಬಳ್ಳಿಯ ನಾಮದೇವ ಸಮಾಜದ ಸ್ತ್ರೀಯಳದೆಂದು ತಿಳಿದ ನಂತರ ರೀತಿ ಪ್ರಕಾರ ಪಂಚನಾಮೆ ಮಾಡಿ ಶವ ಆಸ್ಪತ್ರೆಗೆ ಸಾಗಿಸಲಾಯಿತು.

ಹಾನಗಲ್ಲ ಮಾಮಲೇದಾರ ಶ್ರೀ ಸಿ ವಿ ಅರಾಧ್ಯಮಠರು ೧೫ ನೇ ತಾರೀಕು ರಾತ್ರಿ ವಯಸ್ಸಿನ ೪೭ ನೇ ವರ್ಷದಲ್ಲಿ ಕರಳು ಬೇನೆಯಿಂದ ನಿಧನ ಹೊಂದಿದರು. ಮಧ್ಯಾನ್ಹ ೧ ಗಂಟೆಗೆ ಸ್ಮಶಾನಯಾತ್ರೆ ಹೊರಟಿತು. ಸ್ಮಶಾನದಲ್ಲಿ ಹಲವರು ಮಾತಾಡಿ ಮೃತರ ಗುಣಗಾನ ಮಾಡಿದರು.

ಹೊಳೆಆಲೂರಿನಲ್ಲಿ ೧೬ ನೇ ತಾ. ಶ್ರೀ ಭೀಮಪ್ಪ ಬೆಲ್ಲದ ಇವರ ಅಧ್ಯಕ್ಷತೆಯಲ್ಲಿ ಶಾಂತಿನಾಥ ಇಂಗಳೆಯವರು ವಿಧಾಯಕ ಕಾರ್ಯಕ್ರಮ ಕುರಿತು ಮಾತಾಡಿದರು. ೧೭ ನೇ ತಾರೀಕು ಲಿಂಗನಗೌಡರ ಅಧ್ಯಕ್ಷತೆಯಲ್ಲಿ ಶ್ರೀ ಬಿ ಎಸ್ ಮುನವಳ್ಳಿ ವಕೀಲರು ಮಾತಾಡಿದರು. ಕಾಂಗ್ರೆಸ್ಸಿನ ವಿಷಯವಾಗಿ ಸಹಾನುಭೂತಿ ಹೆಚ್ಚುತಿದೆ ೨೫೦ ರಾಟಿಗಳು ಇಲ್ಲಿ ನಡೆದಿವೆ.

ಕರ್ನಾಟಕ ಪ್ರಾಂತಿಕ ಕಾಂಗ್ರೆಸ ಕಮೀಟಿಯ ಕಾರ್ಯಕಾರೀ ಮಂಡಲದವರು ಸೇವಾದಲದ ಖಾತೆಯನ್ನು ಶ್ರೀ ದುಬೆಯವರಿಗೆ ಒಪ್ಪಿಸಿದ್ದಾರೆ. ಆದುದರಿಂದ ಸೇವಾದಳದವರು ಇನ್ನು ಮುಂದೆ ಅವರ ಅಜ್ಞೆಯಂತೆ ಕಾರ್ಯಮಾಡಬೇಕು. ಸೇವಾದಲಕ್ಕೆ ನನ್ನ ಸಂಬಂಧವಿರುವದಿಲ್ಲ ಎಂದು ಮುಂದಾಗಿ ಶ್ರೀ ಬುರ್ಲಿ ಬಿಂದುಮಾಧವರು ಪ್ರಕಟಿಸುತ್ತಾರೆ.

ಗದಗ ತಾಲೂಕಿನಲ್ಲಿ ಜುಲೈ ತಿಂಗಳದೊಳಗೆ ಅಹಾರ ಧಾನ್ಯಗಳನ್ನು ಅಪ್ಪಣೆಯಿಲ್ಲದೆ ಸ್ಥಳಾಂತರಿಸಿದ್ದಕ್ಕಾಗಿ ಪುಟ್ಟವ್ವ ಪಾಟೀಲ ಗದಗ, ಅಬ್ದುಲ್ ಸಾಬ ಶಲವಡಿ, ಬೆಟಗೇರಿ ಪಂಪಕ್ಕ ಅಂಬಿಗ ಇವರಿಗೆ ಅನುಕ್ರಮವಾಗಿ ೨, ೫, ೫ ರೂ. ದಂಡ ವಿಧಿಸಲಾಯಿತು.

ಹಾನಗಲ್ಲ ತಾಲೂಕಿನ ದೊಡ್ಡ ನೀರಾವರಿ ಯೋಜನೆಯಾದ ಯಮುಗಳ್ಳಿ ಕೆರೆಯ ವಿಷಯ ಚರ್ಚಿಸಲು ತಾಲೂಕಿನ ಪ್ರಮುಖರಿಗೆ ಕರೆ ಬಂದಿದ್ದು ಶ್ರೀ ನರಸಿಂಗರಾವ ದೇಸಾಯಿ ಮೊದಲಾದವರು ಪುಣೆಗೆ ಹೋಗಿ ಬಂದರು. ಈ ಯೋಜನೆ ಪೂರೈಸಲ್ಪಟ್ಟರೆ ಇಡೀ ತಾಲೂಕಿಗೆ ನೀರು ದೊರೆಯುವದು.

ಹುಬ್ಬಳ್ಳಿಯಲ್ಲಿ ಹೊಸದಾಗಿ ಸ್ಥಾಪಿತವಾದ ಭಾರತಮಿಲ್ಲಿನ ಕಾಮಗಾರ ಮಜದೂರ ಸಂಘದ ಸಭೆ ೧೮ ನೇ ತಾರೀಕಿಗೆ ಹುಬ್ಬಳ್ಳಿ ಗೆಜೆಟ ಪತ್ರಿಕೆಯ ಕಚೇರಿಯಲ್ಲಿ ಕೂಡಿತ್ತು. ೧೬ ನೇ ಜುಲೈಗೆ ಸಂಘ ಸ್ಥಾಪನೆಯಾದಂದಿನಿಂದ ಇಲ್ಲಿಯ ವರೆಗೆ ಅದು ನಡೆಸಿದ ಪ್ರಯತ್ನದಿಂದಲೆ ಈಗ ಗಿರಣಿ ಒಡೆಯರು ಕೆಲಸಗಾರರ ತುಟ್ಟಿಭತ್ತೆಯನ್ನು ದಿನಾಲು ನಾಲ್ಕಾಣೆಯಿಂದ ಹೆಚ್ಚಿಸಿದ್ದಾರೆಂದು ತಿಳಿಸಲಾಯಿತು. ಕೆಲಸದಿಂದ ಕಿತ್ತಿ ಹಾಕಲ್ಪಟ್ಟ ೨೦೦ ಕ್ಕಿಂತ ಹೆಚ್ಚು ಜನರನ್ನು ಮತ್ತೆ ಕೆಲಸಕ್ಕೆ ಸೇರಿಸಿಕೊಳ್ಳಲಾಗಿದೆ. ಒಟ್ಟು ೨೮೦೦ ಕೂಲಿಕಾರರಲ್ಲಿ ೨೦೨೫ ಜನರು ಈ ಸಂಘದ ಸದಸ್ಯರಿದ್ದಾರೆಂದು ಹೇಳಲಾಯಿತು. ಡಾ. ಪಟ್ಟಣಶೆಟ್ಟರರು ಕಾಮಗಾರರಿಗೆ ಸಂಘದ ಕಾರ್ಯವನ್ನು ಯಶಸ್ವಿಯಾಗಿ ಮಾಡಿಕೊಂಡು ಹೋಗಬೇಕೆಂದು ಹೇಳಿದರು.

ಗದಗ ಮುನಸಿಪಾಲಿಟಿಯ ಅಧ್ಯಕ್ಷರಾಯ್ಕೆಗಾಗಿ ೧೮ ನೇ ತಾರೀಕಿಗೆ ಸಭೆ ಸೇರಿತ್ತು. ೩೬ ಸದಸ್ಯರು ಸಭೆಗೆ ಬಂದಿದ್ದರು. ಈ ಸಭೆಗೆ ಸಂಪೂರ್ಣ ಮೂರು ದಿನಗಳ ನೋಟೀಸ ಇಲ್ಲೆಂದು ಮೆರವಾಡೆಯವರು ಆಕ್ಷೇಪಿಸಿದ್ದಾರೆಂದು ಅಧ್ಯಕ್ಷ ಅಂಗಡಿಯವರು ಹೇಳಿ ಪ್ರೊಸೀಡಿಂಗ ಪುಸ್ತಕ ತಗೆದುಕೊಂಡು ೧೭ ಜನ ಸದಸ್ಯರೊಡನೆ ಸಭೆ ಬಿಟ್ಟು ಹೋದರು. ಉಳಿದ ೧೯ ಜನರು ಶ್ರೀ ರಾಚಯ್ಯನವರನ್ನು ಆ ಸಭೆಯ ಚೆಅರಮನ್‌ರನ್ನಾಗಿ ಅರಿಸಿ ಶ್ರೀ ಚನ್ನಪ್ಪ ಹೊನಗುಂಡಿಯವರನ್ನು ಅಧ್ಯಕ್ಷರನ್ನಾಗಿಯೂ ಭಗವಾನದಾಸ ಪುಣೇಕರ ಇವರನ್ನು ಉಪಾಧ್ಯಕ್ಷರನ್ನಾಗಿಯೂ ಅರಿಸಿದರು.

ರಾಣೇಬಿನ್ನೂರಿನ ವೀರಭದ್ರಯ್ಯ ಹಲಗೇರಿ ಇವರು ಕಳೆದ ಶುಕ್ರವಾರ ೭೭ ಪೆಂಟಿ ಬೆಲ್ಲ ಅಪ್ಪಣೆ ಇಲ್ಲದೆ ರಾಣೇಬಿನ್ನೂರಿಂದ ಹಲಗೇರಿಗೆ ಸಾಗಿಸುವಾಗ ಹಿಡಿಯಲ್ಪಟ್ಟು ಖಟ್ಲೆಗೆ ಗುರಿಯಾಗಿದ್ದರಷ್ಟೆ ಆ ಖಟ್ಲೆಯಲ್ಲಿ ಅವರಿಗೆ ೫೦ ರೂ. ದಂಡ ವಿಧಿಸಲಾಗಿದೆ. ಇಬ್ಬರು ಚಕ್ಕಡಿಯವರಿಗೆ ೨೦ ರೂ ದಂಡ ವಿಧಿಸಲಾಯಿತು.

ಹುಬ್ಬಳ್ಳಿಯಿಂದ ಗುಂತಗಲ್ಲಿಗೆ ಹೋಗುವ ರಾತ್ರಿ ಗಾಡಿಯಲ್ಲಿ ಬಳ್ಳಾರಿ ಕಡೆಯ ೪-೫ ಜನರು ಐದು ಕಂಬಳಿ ಗಂಟುಗಳಲ್ಲಿ ಸುಮಾರು ೨೦೦೦ ಧೋತರ ಜತಿ ಕಟ್ಟಿಕೊಂಡು ೮-೧೦ ದಿನಗಳ ಹಿಂದೆ ಕಳ್ಳತನದಿಂದ ಸಾಗಿಸುವಾಗ ಗದುಗಿನಲ್ಲಿ ಪೋಲೀಸರ ಕೈಗೆ ಸಿಕ್ಕಿದ್ದು ಅವರು ಆ ಸರಕಿನ ಪಂಚನಾಮೆ ಮಾಡಿ ನಗರದ ಪೋಲೀಸರಿಗೆ ಒಪ್ಪಿಸಿರುವರು. ೫೦-೬೦ ಧೋತರಗಳಿದ್ದ ಇನ್ನೊಂದು ಸಣ್ಣ ಕಂಬಳಿಗಂಟು ಸಿಕ್ಕಿದ್ದು ಅದರ ಒಡೆಯರಾರೆಂಬುದು ಪತ್ತೆಯಾಗಿಲ್ಲ.

# ಕ ನಾ ರ್ ಟ ಕ

## ಬೆಳಗಾವಿ

ತವದಿಯ ಚನಗವಡ ದಾದಾ ಪಾಟೀಲರು ಸ್ಪೆಶಲ್ ಪರಮಿಟ್ಟಿಗಾಗಿ ಅರ್ಜಿ ಕೊಟ್ಟಿದ್ದು ಅದಕ್ಕಾಗಿ ಬೆಳಗಾವಿಯ ಡಿಸ್ಟ್ರಿಕ್ಟ ಸಪ್ಲಾಯ ಅಫೀಸದ ಕಾರಕೂನರಿಗೆ ಲಂಚ ಕೊಡುತ್ತಿದ್ದಾಗ ಸಿಟಿ ಸಬ್ ಇನಸ್ಪೆಕ್ಟರರಾದ ಶ್ರೀ ಕಲ್ಲೂರರು ಅವರನ್ನು ಬಂಧಿಸಿರುವರು. ಪಂಚನಾಮೆ ಆಗಿ ಪೋಲೀಸ ತಪಾಸಣೆ ನಡೆದಿದೆ.

ಮುಂಬಯಿ ಸರಕಾರದ ಲಂಚ ನಿರ್ಮೂಲನ ಪಡೆಯವರು ಬೆಳಗಾವಿ ಸಬ್ ಡಿವಿಜನಲ್ ಕಚೇರಿಯ ಕಾರಕೂನ, ಪೂರ್ವಖಾನದೇಶ ಜಿಲ್ಹೆಯ ಫಾರೆಸ್ಟ ಗಾರ್ಡ ಹುಬ್ಬಳ್ಳಿಯ ರೇಲ್ವೆ ಪಾರ್ಸಲ್ ಕಾರಕೂನ ಮೊದಲಾದ ೭ ಜನ ಅರೋಪಿಗಳನ್ನು ಗೊತ್ತುಹಚ್ಚಿದ್ದಾರೆ.

ಬೆಳಗಾವಿ ಜಿಲ್ಹಾ ಧಾರಣೆ ಸಲಹೆ ಸಮಿತಿಯ ಸದಸ್ಯರಾಗಿ ನೇಮಿಸಲ್ಪಟ್ಟಿದ್ದ ಶ್ರೀ ಕೇಶವರಾವ ಗೋಖಲೆಯವರು ಅದಕ್ಕೆ ರಾಜೀನಾಮೆ ಕೊಟ್ಟಿರುವರು. ಪ್ರಕೃತಿಯನ್ನು ದುರ್ಲಕ್ಷಿಸಿಯೂ ಜನಸೇವೆ ಮಾಡುತ್ತಿದ್ದ ತಮ್ಮ ಮೇಲೆ ಈ ಬಗ್ಗೆ ತರುಣ ಭಾರತದಲ್ಲಿ ಟೀಕೆ ಬಂದುದನ್ನು ನಿಷೇಧಿಸುವದಕ್ಕಾಗಿ ಅವರು ರಾಜೀನಾಮೆ ಕೊಟ್ಟದ್ದಾರೆ. ಅದರಂತೆ ಕಲೆಕ್ಟರಿಗೆ ಮತ್ತು ಪೂರೈಕೆ ಮಂತ್ರಿ ದಿನಕರರಾವ ದೇಸಾಯರಿಗೆ ಬರೆದಿದ್ದಾರೆ.

ಖಾನಪುರ ತಾಲೂಕಿನ ಅಬಕಾರಿ ಖಾತೆಯಲ್ಲಿಯ ಒಬ್ಬ ಅಧಿಕಾರಿ ಅಫು ಮತ್ತು ಗಾಂಜಾ ಅಂಗಡಿಗೆ ಅಪ್ಪಣೆಕೊಡಲು ೧೦ ರೂಪಾಯಿ ತೆಗೆದುಕೊಳ್ಳುತಿರುವಾಗ ಲಂಚ ನಿರ್ಮೂಲನ ಸಮಿತಿಯ ಮುಖ್ಯಾಧಿಕಾರಿ ಶ್ರೀ ಭೋಸಲೆಯವರು ಹಿಡಿದರೆಂದು ತಿಳಿಯುತ್ತದೆ.

ಬೆಳಗಾವಿ ರವಿವಾರ ಪೇಟೆಯ ವರ್ತಕರು ರವಿವಾರ ಪೇಟೆಯಲ್ಲಿ ಜೂಜಾಡುತಿರುವಾಗ ಪೋಲೀಸ ಸಬ್ ಇನಸ್ಪೆಕ್ಟರರು ಅಲ್ಲಿಗೆ ಹೋಗಿ ೮ ಜನರನ್ನು ಬಂಧಿಸಿದರು. ಅದೇ ರೀತಿ ೧೯ನೇ ತಾರೀಕು ಬೋಗಾರ ಅಗಸಿಯಲ್ಲಿ ೯ ಜನರನ್ನು ಹಿಡಿದರು. ಭಾಂದೂರಗಲ್ಲಿಯಲ್ಲಿ ೧೧ ಜನರನ್ನು ಹಿಡಿದರು. ಶಿವಾಜಿ ಬೀದಿಯಲ್ಲಿ ಮೂವರನ್ನು ಹಿಡಿದರು. ಹೀಗೆ ೩-೪ ದಿನಗಳಲ್ಲಿ ಪೋಲೀಸರು ಜೂಜಾಟದ ಬಗ್ಗೆ ಸುಮಾರು ೬೦ ಜನರನ್ನು ಬಂಧಿಸಿರುವರು.

## ವಿಜಾಪುರ

ಬದಾಮಿ ತಾಲೂಕ ಕೆರೂರಲ್ಲಿ ೧೫-೮-೪೬ ಕ್ಕೆ ಮಧ್ಯಾಹ್ನ ೩ ಗಂಟೆ ಸುಮಾರಿಗೆ ಧಾರವಾಡ ಬಾಗಲಕೋಟ ಮೋಟರಿನಲ್ಲಿ ಸುಮಾರು ೨೫—೩೦ ಸೇರು ಸಣ್ಣಕ್ಕಿಯನ್ನು ಯಾರೋ ಒಯ್ಯುತ್ತಿರುವದನ್ನು ೩೮೩ ಬಕಲ್ ನಂಬರ ಪೋಲೀಸ ಹಿಡಿದು ಇದರ ಒಡೆಯರಾರೆಂದು ಕೇಳಲಾಗಿ ಯಾರೂ ಉತ್ತರಿಸಲಿಲ್ಲ. ಆ ಅಕ್ಕಿಯನ್ನು ಪಂಚಾಯತಿ ಕಚೇರಿಯಲ್ಲಿ ಒಯ್ದಿಟ್ಟಿರುವರು. ಪಂಚನಾಮೆ ಮುಂತಾದ್ದೇನೂ ಮಾಡಿದಂತೆ ತೋರಲಿಲ್ಲೆಂದು ಮುಂತಾಗಿ ನಾರಾಯಣಪ್ಪಾ ಕರಿಮುಪ್ಪನವರ ಅಗಸರಕೊಪ್ಪ ಇವರು ತಿಳಿಸುತ್ತಾರೆ.

ಅಮೀನಗಡ ಭಾಗದಲ್ಲಿಯ ಮುಂಗಾರಿ ಬೆಳೆ ಮತ್ತು ಶೆಂಗಾ ಬೆಳೆಗೆ ಡಬಗಳ್ಳಿ, ಹುಳದ ಮಾದರಿಯ ಹುಳ ಹತ್ತಿ ಅವನ್ನು ನಾಶಮಾಡಹತ್ತಿವೆ. ಇದರಿಂದ ರೈತರು ಚಿಂತೆಗೊಳಗಾಗಿದ್ದಾರೆ. ಒಕ್ಕಲತನ ಖಾತೆಯವರು ಇತ್ತ ಗಮನಿಸಬೇಕಾದುದು ಅವಶ್ಯವೆಂದು ಓರ್ವ ರೈತ ತಿಳಿಸುತ್ತಾನೆ.

ವಿಜಾಪುರ ಜಿಲ್ಹೆಯಲ್ಲಿ ಜುಲೈ ತಿಂಗಳಲ್ಲಿ ಬೇರೆ ಬೇರೆ ನಿರ್ಬಂಧಕಾಜ್ಞೆಗಳನ್ನು ಮುರಿದದ್ದಕ್ಕಾಗಿ ಹನ್ನೊಂದು ಅರೋಪಿಗಳಿಗೆ ದಂಡವನ್ನು ವಿಧಿಸಲಾಯಿತು.

ಇಲಕಲ್ಲ ಮುನಿಸಿಪಾಲಿಟಿ ಅಧ್ಯಕ್ಷರಾದ ಮಹಾಲಿಂಗಪ್ಪಾ ಗೊಂಗಡಶೆಟ್ಟಿ ಮತ್ತು ಸದಸ್ಯರಾದ ಸಯ್ಯದ ಫಕರುದ್ದೀನ ಮತ್ತು ಸಯ್ಯದ ಧಾಜಾಸಾ ಮತ್ತು ರಿಕಾರ್ಡ ಕಾರಕೂನ ಆರ್ ಬಿ. ಕುಲಕರ್ಣಿಯವರಿಗೆ ವಿಜಾಪುರ ಮ್ಯಾಜಿಸ್ಟ್ರೇಟರು ವಿಶ್ವಾಸಭಂಗ, ಖೊಟ್ಟಿ ಕಾಗದ ಹಾಗು ಸುಳ್ಳು ಲೆಕ್ಕಗಳ ಬಗ್ಗೆ ಒಂದು ದಿನದ ಶಿಕ್ಷೆ ವಿಧಿಸಿದ್ದರು. ಸರಕಾರದವರು ಮಾಡಿದ ಅಪೀಲಿನಲ್ಲಿ ಸೆಶನ್ಸ ಜಜ್ಜರು ಅಧ್ಯಕ್ಷರು ಹಾಗು ಇಬ್ಬರು ಸದಸ್ಯರಿಗೆ ೬ ತಿಂಗಳ ಕಠಿನ ಶಿಕ್ಷೆ ಮತ್ತು ರಿಕಾರ್ಡ ಕಾರಕೂನರಿಗೆ ೪ ತಿಂಗಳ ಶಿಕ್ಷೆ ೧೦೦ ರೂಪಾಯಿ ದಂಡ ವಿಧಿಸಬೇಕೆಂದು ಹಾಯಕೋರ್ಟಿಗೆ ಶಿಫಾರಸ ಮಾಡಿದ್ದಾರೆ.

ಬಾಗಲಕೋಟೆಯ ಪೋಲೀಸ ಇನಸ್ಪೆಕ್ಟರ ಎಸ್. ಜಿ. ಪಾಟೀಲರಿಗೆ ಲಂಚ ತೆಗೆದುಕೊಂಡ ಆರೋಪದ ಬಗ್ಗೆ ಮ್ಯಾಜಿಸ್ಟ್ರೇಟರು ೧ ದಿನದ ಶಿಕ್ಷೆ ವಿಧಿಸಿದರು. ಸರಕಾರದವರು ಮಾಡಿದ ಅಪೀಲಿನಲ್ಲಿ ಸೆಶನ್ಸ ಜಜ್ಜರು ಅವರಿಗೆ ೧ ವರ್ಷದ ಕಠಿನ ಶಿಕ್ಷೆ ಮತ್ತು ೮೦೦ ರೂಪಾಯಿ ದಂಡ ವಿಧಿಸಬೇಕೆಂದು ಶಿಫಾರಸ ಮಾಡಿದ್ದಾರೆ.

೧೨ ನೇ ತಾರೀಕು ಬದಾಮಿ ಗುಳೇದಗುಡ್ಡ ರೋಡ ಮೇಲೆ ಬದಾಮಿ ಸ್ಟೇಶನ ಬಳಿಯಲ್ಲಿ ಮತ್ತು ಬೇರೆ ಬೇರೆ ಕಡೆಗೆ ಮೂರು ಸ್ಥಳಗಳಲ್ಲಿ ದರೋಡೆಗಾರ ಜನರು ರಸ್ತೆ ಲೂಟಿ ಮಾಡಿದ್ದಲ್ಲದೆ ಅವತ್ತೇ ಕಟಗೇರಿ ಕುರುಬರ ೧೦—೧೨ ಕುರಿಗಳನ್ನು ಕದ್ದುಕೊಂಡು ಹೋಗಿರುವರು. ಪೋಲೀಸ ಅಧಿಕಾರಿಗಳು ೬ ಜನ ದರೋಡೆಗಾರರನ್ನು ಸೆರೆಹಿಡಿದಿರುವರು.

## ಉತ್ತರ ಕನ್ನಡ

ಹೊನ್ನಾವರದ ಸರ್ಕಲ ಅಫೀಸರ ಶ್ರೀ ಶೆಟ್ಟಿಯವರು ೧೫ ನೇ ತಾರೀಖು ಜಲವಳ್ಳಿಯ ಸೀದಾ ಅಂಗಡಿಗೆ ಹೋಗಿ ತಪಾಸಮಾಡಲಾಗಿ ೨೧ ಪಾಯಲಿ ಘಾಟ ಅಕ್ಕಿ ಕಡಿಮೆ ಇದ್ದದ್ದು, ಗಾಂವಠಿ ಅಕ್ಕಿ ೫೬ ಪಾಯಲಿ ಹೆಚ್ಚಿಗಿದ್ದದ್ದು, ಸಣ್ಣಕ್ಕಿ ನಾಲ್ಕು ಪಾಯಲಿ ಕಡಿಮೆ ಇದ್ದದ್ದು ಕಂಡು ಬಂತು. ಚಿಮಣಿಎಣ್ಣೆ ಒಂದು ಪ್ಯಾಂಟು ಹೆಚ್ಚಿಗೆ ಇತ್ತು. ಸೀದಾ ತೆಗೆದುಕೊಂಡು ಹೋಗುತಿದ್ದ ಓರ್ವನ ಅಕ್ಕಿ ಅಳೆಸಲಾಗಿ ೪ ಪಾಯಲಿ ಇದ್ದವು. ಅವರ ಲೆಕ್ಕದಲ್ಲಿ ಅವನ ಹೆಸರಿಗೆ ೮ ಪಾಯಲಿ ಖರ್ಚು ಹಾಕಿದ್ದರು. ಮರುದಿನವೂ ಆ ಅಂಗಡಿಯಿಂದ ೩ ಮುಡಿ ಅಕ್ಕಿ ಎಲ್ಲಿಗೋ ಹೋಗುತ್ತಿದ್ದುದನ್ನು ಶೆಟ್ಟಿಯವರು ಹಿಡಿದರು. ಇವೆಲ್ಲದರ ಬಗ್ಗೆ ಪಂಚನಾಮೆ ಮಾಡಿದ್ದಾರೆ.

## ಬಳ್ಳಾರಿ

ಹಂಪಸಾಗರದಲ್ಲಿ ಶ್ರೀ ಮುದಗಿರಿ ಸಿದ್ಧಲಿಂಗಪ್ಪನವರ ಅಧ್ಯಕ್ಷತೆಯಲ್ಲಿ ಸಭೆ ಸೇರಿ ಹೊಸಪೇಟೆಯ ಹತ್ತರ ಮದ್ರಾಸ ಸರಕಾರದವರು ತುಂಗಭದ್ರಾ ನದಿಗೆ ಅಣೆಕಟ್ಟು ಕಟ್ಟುವದರಿಂದ ನಮಗೆ ಬಹಳ ಹಾನಿಯಾದೆ ಅದನ್ನು ಹಡಗಲಿಯ ಹತ್ತರ ಕೈಕೊಳ್ಳಬೇಕೆಂಬ ಗೊತ್ತುವಳಿ ಸ್ವೀಕೃತವಾಯಿತು.

ಮದ್ರಾಸ ಶಾಸನ ಸಭೆಯ ಪಬ್ಲಿಕ್ ಅಕೌಂಟ್ಸ ಕಮೀಟಿಗೆ ಶ್ರೀ ಬಿ. ಅನಂತಾಚಾರ್ಯ (ಹೊಸಪೇಟೆ) ಕೆ. ರಾಘವನ್, ಎಂ. ಬಾಪಿಸೀಡು ಎಸ್. ಎಂ. ಆರ್. ಸುಬ್ರಹ್ಮಣ್ಯಂ, ಎಸ್. ಎಸ್. ವರದಾಚಾರಿ, ಕೆ. ಎ. ನಾಚಿಯಪ್ಪ ಗೌಡರ, ಫರ್ನಾಂಡೀಜ ಅಬ್ದುಲ್ ಹಮೀದ ಖಾನ ಮತ್ತು ಅಬ್ದುಲ್ ರಾವುಫ (ಬಳ್ಳಾರಿ) ಇವರು ಆರಿಸಲ್ಪಟ್ಟಿದ್ದಾರೆ.

ಹಿರೇಹಡಗಲಿಯಲ್ಲಿ ಶ್ರೀಮದ್ರಂಭಾಪುರಿ ಪೀಠದ ಜಗದ್ಗುರು ಶಿವಾನಂದ ಶಿವಾಚಾರ್ಯ ಮಹಾಸ್ವಾಮಿಗಳು ಶಿವಾಧೀನರಾದ ನಿಮಿತ್ತ ದುಃಖ ಪ್ರದರ್ಶನ ಮಾಡಲಾಯಿತು. ಪ್ರಮುಖರಾದ ಶ್ರೀ ಹಾಲಸ್ವಾಮಿಗಳವರು, ಪಿ. ಎಂ. ಪರಮೇಶ್ವರಯ್ಯನವರು, ಪಿ. ಶಿವರುದ್ರ. ಗೌಡರು ಮೊದಲಾದವರು ಕೂಡಿದ್ದರು. ವೇ. ಪುರಾಣಿಕ ಮಠದ ವಿರುಪಾಕ್ಷಶಾಸ್ತ್ರಿಗಳು ಜಗದ್ಗುರುಗಳ ಗುಣಗಾಯನ ಮಾಡಿದರು. ಉತ್ತರಾಧಿಕಾರಿಗಳಾದ ಶ್ರೀ ಗಂಗಾಧರ ಶಿವಾಚಾರ್ಯ ಸ್ವಾಮಿಗಳವರು ಭಾಷಣ ಮಾಡಿದರು.

ಬಳ್ಳಾರಿ ಜಿಲ್ಹೆಯಲ್ಲಿ ಪಾನ ನಿರೋಧವು ಯಶಸ್ವಿಯಾಗಬೇಕಾದರೆ ಈ ಜಿಲ್ಹೆಯ ಗಡಿಯಲ್ಲಿರುವ ಬೇರೆ ಪ್ರಾಂತಗಳ ಮತ್ತು ಸಂಸ್ಥಾನಗಳ ಸಹಕಾರ ಅತ್ಯವಶ್ಯ ಬೇಕು. ಆದುದರಿಂದ ಮದ್ರಾಸ ಸರಕಾರವು ಈ ಜಿಲ್ಹೆಯ ಗಡಿಯಲ್ಲಿರುವ ಬೇರೆ ಪ್ರಾಂತ ಮತ್ತು ಸಂಸ್ಥಾನಗಳ ಸರಕಾರಗಳನ್ನು ಈ ಜಿಲ್ಹೆಯಿಂದ ೧೦ ಮೈಲುಗಳ ವರೆಗೆ ಮದ್ಯದ ಅಂಗಡಿಗಳನ್ನು ಮುಚ್ಚಿ ಸಹಕರಿಸಬೇಕೆಂದು ಕೇಳಿಕೊಳ್ಳುವ ಗೊತ್ತುವಳಿ ಬಳ್ಳಾರಿ ಜಿಲ್ಹಾ ಕಾಂಗ್ರೆಸ ಕಮೀಟಿಯವರು ಪಾಸ ಮಾಡಿರುವರು.

ಕಂಪ್ಲಿ ಹಾಯಸ್ಕೂಲ ಸಮಿತಿಯವರು ಸಭೆ ಸೇರಿ ಮಾಧ್ಯಮಿಕ ವಿದ್ಯಾಭ್ಯಾಸಕ್ಕೊದಗಿದ ಸೌಕರ್ಯಗಳನ್ನು ವಿವೇಚಿಸಿದರು. ಈ ಊರಿನಲ್ಲಿ ಹಾಯಸ್ಕೂಲು ಪ್ರಾರಂಭಿಸಲು ಸಹಾಯ ಮಾಡಿದವರನ್ನಭಿನಂದಿಸಲಾಯಿತು. ಶ್ರೀ. ಮೋತೀಲಾಲರು ಗತಿಸಿದ ತಮ್ಮ ತಂದೆಯವರ ಹೆಸರಿನಲ್ಲಿ ಸುಮಾರು ೪೦ ಸಾವಿರ ರೂಪಾಯಿ ಬೆಲೆಬಾಳುವ ಕಟ್ಟಡವನ್ನು ಹೈಸ್ಕೂಲಿಗಾಗಿ ಕಟ್ಟಿಸಿ ದಾನ ಮಾಡಿದ್ದಕ್ಕಾಗಿ ಕೃತಜ್ಞತೆಯನ್ನು ಸಮರ್ಪಿಸಲಾಯಿತು.

## ಕನ್ನಡ ಸಂಸ್ಥಾನ

ದಾವಣಗೇರಿ ತಾಲೂಕ ಪ್ರಜೆಗಳು ಧರ್ಮರತ್ನಾಕರ ಶ್ರೀ ರಾಜನಹಳ್ಳಿ ಮದ್ದುರಾಯಪ್ಪನವರಿಗೂ ಜಿಲ್ಹಾ ಬೋರ್ಡ ಅಧ್ಯಕ್ಷರಾದ ಕೊಂಡೂಜಿ ಬಸಪ್ಪನವರಿಗೂ ಗೌರವ ಮಾಡಿದರು. ಪೌರಸಭಾಧ್ಯಕ್ಷರಾದ ಹರಳೆಣ್ಣೆ ಕೊಟ್ಟೂರ ಬಸಪ್ಪನವರ ಅಧ್ಯಕ್ಷತೆಯಲ್ಲಿ ಬಿನ್ನವತ್ತಳೆಯನ್ನರ್ಪಿಸಿದರು.

ತುಮಕೂರಿನ ಪ್ರಸಿದ್ಧ ವರ್ತಕರಾದ ಶ್ರೀ ಬಿ. ಎಂ. ಸಿದ್ದರಾಮಣ್ಣನವರು ತಮ್ಮ ಒಂದೂ ಕಾಲು ಲಕ್ಷರೂಪಾಯಿ ಬೆಲೆ ಬಾಳುವ ಚಿರ ಸ್ಥಿರ ಅಸ್ತಿಗಳನ್ನು ವೀರಶೈವ ಅನಾಥನಾಲಯಕ್ಕೆ ದಾನ ಮಾಡಿರುವರು. ಮತ್ತು ಅದಕ್ಕೊಂದು ವಿಶ್ವಸ್ತ ಮಂಡಳವನ್ನೇರ್ಪಡಿಸಿರುವರು.

ಮಿರಜೆಯ ನೀರಿನ ಯೋಜನೆಯನ್ನು ಸರಕಾರದವರು ತೆಗೆದುಕೊಳ್ಳಬೇಕೆಂದೂ ಗಟಾರ ಯೋಜನೆಯನ್ನು ಮುನಸಿಪಾಲಿಟಿಯವರು ಕೈಕೊಳ್ಳುವರೆಂದೂ ಮಿರಜೆ ಮುನಸಿಪಾಲಿಟಿ ಸಭೆಯಲ್ಲಿ ನಿರ್ಧಯಿಸಲಾಯಿತು.

---

ಸಿದ್ಧಾಪುರಕ್ಕೆ ೧೩ ನೇ ತಾರೀಕಿಗೆ ಜವಳಿ ಅಂಗಡಿಯವರ ಜವಳಿ ಕೋಟಾ ಬಂತು. ಅದು ಅಂಗಡಿ ಮುಟ್ಟುವಷ್ಟರಲ್ಲಿ ಪೋಲೀಸರು ಪ್ರತಿಯೊಂದು ಅಂಗಡಿಯನ್ನು ಮುತ್ತಿ ತಮಗೆ ಬೇಕಾದ ಬಟ್ಟೆಗಳನ್ನು ಆರಿಸಿಕೊಳ್ಳಹತ್ತಿದರು. ಈ ಗದ್ದಲದಲ್ಲಿ ಹಳ್ಳಿಗರನ್ನು ಬಡವರನ್ನು ಕೇಳುವವರಾರೆಂದು ಓರ್ವರು ಕೇಳುತ್ತಾರೆ

## ಮುಂಬಯಿ

ಮುಂಬಯಿ ನಗರದ ಟ್ಯಾಕ್ಸಿ ಮತ್ತು ವಿಕ್ಟೋರಿಯಾ ಸರ್ವಿಸುಗಳನ್ನು ರಾಷ್ಟ್ರೀಕರಿಸಬೇಕೆಂದು ಮುಂಬಯಿ ಸರಕಾರವು ಯೋಜಿಸಿದೆ ಸಾರ್ವಜನಿಕರ ಅನುಕೂಲತೆ ಮತ್ತು ಅಧಿಕ ಸುವ್ಯವಸ್ಥೆಯ ನೆಲೆಯಿಂದ ಈ ಯೋಜನೆಯನ್ನು ಪ್ರಾರಂಭಿಸಬೇಕೆಂದಿರುವರು. ಹೊಸದಾಗಿ ಲಾಯಸೆನ್ಸ ಪಡೆಯಲು ಹೋದ ಮೋಟರ ಡ್ರಾಯವರರಿಗೆ ಹಿಂದಿನಂತೆ ೩ ವರ್ಷಗಳ ಲಾಯಸೆನ್ಸ ಕೊಡದೆ ಒಂದೊಂದು ತಿಂಗಳ ಲಾಯಸೆನ ಕೊಡುತಿರುವರು.

ಮುಂಬಯಿಯ ಪ್ರಮುಖರಾದ ಸರ್ ರಹಿಮತುಲ್ಲಾ ಚಿನಾಯ, ಸರ್ ಸುಲ್ತಾನ ಚಿನಾಯ ಮತ್ತು ಸರ್ ಫಜಲ್ ರಹಿಮತುಲ್ಲಾ ಇವರು ಮುಸ್ಲಿಂ ಲೀಗಿನ ಬಿನ್ನಹವನ್ನು ಕಡೆಗಣಿಸಿ ಬಿರುದುಗಳನ್ನು ಬಿಟ್ಟುಗೊಡಲು ನಿರಾಕರಿಸಿದ್ದಾರೆ. ಲೀಗಿನ ಸದ್ಯದ ಧೋರಣೆಗೆ ತಮ್ಮ ಒಪ್ಪಿಗೆಯಿಲ್ಲೆಂದು ಇವರು ಸ್ಪಷ್ಟವಾಗಿ ಸಾರಿರುವರು.

ಕ್ಷಮೆ ಬೇಡಿಕೊಂಡ ಇಬ್ಬರು ದಲಿತ ವರ್ಗದ ಸತ್ಯಾಗ್ರಹಿಗಳ ಬಿಡುಗಡೆ ಮಾಡಲಾಯಿತು. ಇದು ವರೆಗೆ ಒಟ್ಟು ೩೩೬ ಸತ್ಯಾಗ್ರಹಿಗಳು ಕ್ಷಮೆ ಬೇಡಿದ್ದು ಅವರ ಬಿಡುಗಡೆ ಮಾಡಲಾಗಿದೆ.

ಮುಂಬಯಿ ಪ್ರಾಂತದಲ್ಲಿ ಎರಡು ಒಕ್ಕಲತನ ಕಾಲೇಜಗಳನ್ನು ಹೊರಡಿಸುವವರಿದ್ದಾರೆ. ಗುಜರಾಥದಲ್ಲಿ (ಆನಂದ) ಒಂದು ಮತ್ತು ಕರ್ನಾಟಕದಲ್ಲಿ (ಅರಭಾವಿ) ಇಲ್ಲವೆ (ಬಾಗಲಕೋಟೆಯಲ್ಲಿ) ಒಂದು ತೆರೆಯಲಾಗುವದೆಂಬು ತಿಳಿಯುತ್ತದೆ.

ರಾಂಡೇರ ನಗರ ಸಭೆಯ ಕಾರಕೂನರು ಮೊದಲಾದವರು ಬಾಕಿ ಉಳಿದ ಎಲ್ಲ ಸಂಬಳವನ್ನು ಕೂಡಲೆ ಕೊಡಬೇಕೆಂದು ಸಂಪು ಹೂಡಿದ್ದಾರೆ.

ಮುಂಬಯಿ ಪ್ರಾಂತದ ಹಳ್ಳಿಪಳ್ಳಿಗಳಲ್ಲಿಯ ಮತ್ತು ನಗರಗಳಲ್ಲಿಯ ಬಡ ಜನರನ್ನು ಇತರರು ಸುಲಿದುಬಿಡಬಾರದೆಂಬ ಉದ್ದೇಶದಿಂದ ಬಡವರಿಗೆ ರಕ್ಷಣೆ ಕೊಡುವುದಕ್ಕಾಗಿ ಸಾವುಕಾರರ ಚಟುವಟಿಕೆಗಳನ್ನು ನಿರ್ಬಂಧಿಸುವ ಮಸೂದೆಯೊಂದನ್ನು ಸರಕಾರ ಶಾಸನಸಭೆಯಲ್ಲಿ ತರಲಿದೆ.

ಅಖಿಲ ಭಾರತ ಹರಿಜನ ಸಂಘದವರು ದಲಿತ ವರ್ಗದ ಮಹಾಮಂಡಳದವರ ವಿರುದ್ಧ ಪ್ರತಿ ಸತ್ಯಾಗ್ರಹ ಹೂಡಬಾರದೆಂದು ಸರದಾರ ಪಟೇಲರು ಆ ಸಂಘದವರಿಗೆ ತಿಳಿಸಿದ್ದಾರೆ. ಡಾ. ಅಂಬೇಡಕರರ ಅನುಯಾಯಿಗಳು ಹೂಡಿದ್ದು ಸತ್ಯಾಗ್ರಹವೇ ಅಲ್ಲ. ಅವರಲ್ಲಿ ಕೇವಲ ೩-೪ ವಾರ ಶಿಕ್ಷೆಯಾದವರು ಕೂಡ ಕ್ಷಮೆ ಬೇಡಿ ಬಿಡುಗಡೆ ಹೊಂದುತಿರುವರೆಂದು ಮುಂತಾಗಿ ಅವರು ಬರೆದಿದ್ದಾರೆ.

ಇನ್ನು ಮೂರು ತಿಂಗಳಗಳಲ್ಲಿ ಚಿಮಣಿ ಎಣ್ಣೆ ಪೂರೈಕೆ ಇನ್ನೂ ಹೆಚ್ಚುವುದೆಂದು ತಿಳಿಯುತ್ತದೆ.

ಮುಸ್ಲಿಂ ಲೀಗಿನ ಹೋರಾಟವು ಬ್ರಿಟಿಶರ ವಿರುದ್ಧ ಇರದೆ ಪ್ರಥಮತಃ ಹಿಂದುಗಳ ವಿರುದ್ಧವೇ ಇರುವದೆಂದು ಕಲಕತ್ತೆಯಲ್ಲಿಯ ದಂಗೆಯಿಂದ ಸಿದ್ಧವಾಗಿರುವದರಿಂದ ಲೀಗಿನ ಈ ಹೋರಾಟದ ವಿರುದ್ಧ ತಮ್ಮ ಪಕ್ಷದ್ದೇನೂ ಸಂಬಂಧವಿಲ್ಲೆಂದು ಕಮ್ಯುನಿಸ್ಟ ಪಕ್ಷದ ಧುರೀಣರಾದ ಪಿ. ಸಿ. ಜೋಶಿಯವರು ಪ್ರಕಟನೆ ಮುಲಕ ಸಾರಿದ್ದಾರೆ.

ಮುಂಬಯಿ ಪ್ರಾಂತದ ನಿಯೋಜಿತ ಗವರ್ನರ ಸರ್ ಅಂಡ್ರ್ಯೂ ಕ್ಲೋ ಇವರು ೧೯ ಕ್ಕೆ ಮುಂಬಯಿಗೆ ಬಂದಿದ್ದು ೨೦ ನೇ ತಾರೀಕು ಅವರ ಪ್ರತಿಜ್ಞಾವಿಧಿ ಜರುಗಿತು. ಸದ್ಯದ ಗವರ್ನರ ಸರ್ ಜಾನ್ ಕಾಲವಿಲ್‌ರು ೧೯ ನೇ ತಾರೀಕು ಮಂತ್ರಿಮಂಡಳದ ಸಭೆ ಕರೆದು ಎಲ್ಲರ ನಿರೋಪ ತೆಗೆದುಕೊಂಡರು. ಅವರು ೨ ತಿಂಗಳ ರಜೆ ಮೇಲೆ ಹೋಗುವರು.

೫ ಮಣ ಅಕ್ಕಿಯ ಸಂಗ್ರಹವಿಟ್ಟದ್ದಕ್ಕಾಗಿ ಪುಣೆ ಗಣೇಶಪೇಟೆಯಲ್ಲಿಯ ಮಶಾಯಕ ಕಾಶೀಮುಸಾಹೇಬ ಎಂಬವನಿಗೆ ೪೦೦ ರೂ. ದಂಡ ವಿಧಿಸಲಾಯಿತು.

ಅಂಗಡಿಯಲ್ಲಿ ಪೆನ್ಸಿಲ್ ಇದ್ದೂ ಇಲ್ಲೆಂದು ಹೇಳಿದ್ದಕ್ಕಾಗಿ ಸೋಮವಾರಪೇಟೆಯಲ್ಲಿಯ ಒಬ್ಬ ವ್ಯಾಪಾರಿಗೆ ೨೦೦ ರೂ. ದಂಡವಾಯಿತು.

ಅಹಮ್ಮದನಗರ ಜಿಲ್ಹೆಯಲ್ಲಿ ಬೇರೆ ಬೇರೆ ನಿರ್ಬಂಧಕಾಜ್ಞೆಯನ್ನು ಮುರಿದದ್ದಕ್ಕಾಗಿ

# ಹಿಂದುಸ್ತಾನ

## ಮದ್ರಾಸ

ತಮ್ಮ ಸಂಬಳವನ್ನು ೧೧ ರೂ. ಗಳಿಂದ ೩೫ ರೂ. ಗಳ ವರೆಗೆ ಏರಿಸಬೇಕು. ಸಂಘಕ್ಕೆ ಮನ್ನಣೆ ಕೊಡಬೇಕು ಮೊದಲಾದ ಬೇಡಿಕೆಗಳನ್ನು ಮುಂದಿಸಿ ೩೧ನೇ ತಾರೀಕಿನಿಂದ ಸಂಪು ಹೂಡುವ ನೋಟೀಸನ್ನು ಮದುರಾ ನಗರ ಸಭೆಯ ಕಸಗೂಡಿಸುವವರು ಕೊಟ್ಟಿದ್ದಾರೆ.

ಮದ್ರಾಸದ ಮುಖ್ಯ ಮಂತ್ರಿಗಳಾದ ಶ್ರೀ ಟಿ. ಪ್ರಕಾಶಂರು ಶಾಸನ ಸಭೆಯಲ್ಲಿ ನೀರಾವರಿ ಬೇಡಿಕೆ ಬಗ್ಗೆ ಮಾತಾಡುತ್ತ ಪಂಜಾಬ ಪ್ರಾಂತದವರು ೪೪ ಕೋಟಿ ರೂ. ವೆಚ್ಚಮಾಡಿ ಅತ್ಯುತ್ತಮ ನೀರಾವರಿ ವ್ಯವಸ್ಥೆ ಮಾಡಿದ್ದಾರೆ ಅದರಂತೆ ಮದ್ರಾಸದಲ್ಲಿಯೂ ಮಾಡಬೇಕೆಂದಿದ್ದೇವೆ. ಹಣ ಬೇಕಾದರೆ ಸಾಲ ತೆಗೆಯಲು ಸಹ ಹೆದರುವದಿಲ್ಲ ಎಂದು ಮುಂತಾಗಿ ಹೇಳಿದರು.

ಎಸ್. ಆಯ. ರೇಲ್ವೆಯ ಕೆಲಸಗಾರರು ಅಗಸ್ಟ ೨೪ ರಿಂದ ಸಂಪನ್ನು ಪ್ರಾರಂಭಿಸುವರು ಅದುದರಿಂದ ೨೪ನೇ ತಾ. ನ ಮಧ್ಯರಾತ್ರಿಯೊಳಗಾಗಿ ಮುಗಿಸಲಾಗದ ಪ್ರವಾಸವನ್ನು ಜನ ಕೈಕೊಳ್ಳಬಾರದು ಎಂದು ರೇಲ್ವೆ ಯುನಿಯನ್ ಸೆಕ್ರೆಟರಿಗಳು ಸುದ್ದಿಗಾರರಿಗೆ ತಿಳಿಸಿದರು.

ಮದ್ರಾಸ ಸರಕಾರದವರು ಶೀಘ್ರದಲ್ಲಿಯೆ ಜೂಜಾಟ ಹಾಗು ಶರ್ಯತ್ತುಗಳನ್ನು ಪ್ರತಿಬಂಧಿಸುವ ಉಪಾಯಗಳನ್ನು ಕೈಕೊಳ್ಳಬೇಕೆಂದು ನಿರ್ಧರಿಸಲಾಗಿದೆಂದು ಮುಖ್ಯ ಮಂತ್ರಿಗಳು ಹೇಳಿದರು. ಆರ್ಥಿಕ ಮೊದಲಾದ ಅಡಚಣೆ ಅಡ್ಡ ಬರುವದೆಂಬದನ್ನು ಮರೆಯಲಾಗದೆಂದೂ ಅವರು ಸೂಚಿಸಿದರು.

## ಮಧ್ಯಪ್ರಾಂತ

ನಾಗಪುರದಲ್ಲಿಯ ದಲಿತ ವರ್ಗದ ಮುಖಂಡರು ಈಗಿನಂತೆಯೇ ತಮ್ಮ ಅನುಯಾಯಿಗಳನ್ನು ಉದ್ರೇಕಿಸುವ ಭಾಷಣ ಇನ್ನು ಮುಂದೆಯೂ ಮಾಡತೊಡಗಿದರೆ ಮತ್ತು ತಮ್ಮ ಧೋರಣವನ್ನು ಬದಲಿಸದಿದ್ದರೆ ಸರಕಾರವು ಅವರ ಮೇಲೆ ಉಗ್ರ ಉಪಾಯಗಳನ್ನು ಕೈಕೊಳ್ಳಬೇಕಾಗುವದು ಎಂದು ಮಧ್ಯಪ್ರಾಂತ ಸರಕಾರದವರು ಸಾರಿದ್ದಾರೆ.

ರೇಲ್ವೆ ದರಗಳು ಏರುವ ಸಂಭವವಿದೆಂದು ಕೇಂದ್ರ ಸರಕಾರದ ರೇಲ್ವೆ ಖಾತೆಯ ಮುಖ್ಯ ಕಮೀಶನರರಾದ ಕರ್ನಲ್ ಎಮರ್ಸನ್‌ರು ಮಧ್ಯಪ್ರಾಂತ ವಣಿಕ ಸಂಘದ ಸಮಿತಿಯವರೊಡನೆ ಸಂಭಾಷಿಸುತ್ತ ಸೂಚಿಸಿದರು. ದರಗಳನ್ನು ಬಹಳ ಏರಿಸಲಾಗುವದಿಲ್ಲೆಂದು ಆಶ್ವಾಸಿಸಿದರು ರೇಲ್ವೆ ಓಡಾಟ ಯುದ್ಧಪೂರ್ವದಲ್ಲಿಯಂತಾಗಬೇಕಾದರೆ ಇನ್ನು ೮ ತಿಂಗಳ ಬೇಕೆಂದೂ ಅವರು ಹೇಳಿದರು.

ವರ್ಧಾ ಮತ್ತು ಅದರ ಸುತ್ತಲಿನ ಒಂದು ಮೈಲು ಅಂತರದೊಳಗಿನ ಪ್ರದೇಶದಲ್ಲಿ ಚಳಿಜ್ವರ ಪ್ರತಿಬಂಧಕ ಯೋಜನೆಯನ್ನು ಕೂಡಲೆ ಕೈಕೊಳ್ಳಲಿರುವರು.

## ಹೊಸದಿಲ್ಲಿ

ಪಂಜಾಬದ ಮುಖ್ಯ ಪ್ರಧಾನ ಸರ್ ಖಿಜರ ಹಯಾತ್ ಖಾನರು ಮುಖ್ಯ ಮಂತ್ರಿತ್ವಕ್ಕೆ ರಾಜೀನಾಮೆ ಕೊಟ್ಟು ನಡುಗಾಲ ಸರಕಾರದಲ್ಲಿ ಸೇರುವರೆಂಬ ಸುದ್ದಿಯಿದೆ. ಆದರೆ ಪಂಜಾಬದ ಮಂತ್ರಿಗಳಾದ ಸರದಾರ ಬಲದೇವಸಿಂಗ ಮೊದಲಾದವರು ಇದನ್ನು ನಿರಾಕರಿಸುತಿರುವರು.

ದಿಲ್ಲಿಯಲ್ಲಿಯ ಮಹಾರಾಷ್ಟ್ರ ಸಮಾಜಕ್ಕೆ ಸ್ವಂತ ಒಡೆತನದ ಕಟ್ಟಡವಿಲ್ಲದ್ದರಿಂದ ಬೃಹನ್ಮಹಾರಾಷ್ಟ್ರ ಶುಗರ ಸಿಂಡಿಕೇಟಿದ ಮ್ಯಾನೇಜಿಂಗ ಡಾಯರೆಕ್ಟರ ಚಂದ್ರಶೇಖರ ಅಗಾಶೆಯವರು ಸಮಾಜಕ್ಕೆ ಒಂದು ಲಕ್ಷ ರೂಪಾಯಿ ಕಾಣಿಕೆ ಕೊಟ್ಟಿದ್ದಾರೆ

---

೧೫ ಆರೋಪಿಗಳನ್ನು ಬಂಧಿಸಲಾಯಿತು ಮತ್ತು ಅವರ ಮೇಲಿನ ಆರೋಪಗಳ ವಿಚಾರಣೆಯಾಗಿ ೪ ರಿಂದ ೫೦ ರೂ. ದಂಡ ವಿಧಿಸಲಾಯಿತು.

ಸೊಲ್ಲಾಪುರದಲ್ಲಿಯ ಎಲ್ಲ ಕಸಗೂಡಿಸುವವರು ಮತ್ತು ಭಂಗಿಗಳು ೨೦ ನೇ ತಾರೀಕಿನಿಂದ ಸಂಪು ಪ್ರಾರಂಭಿಸಿರುವರು. ಸಂಬಳ ಮತ್ತು ತುಟ್ಟಿಭತ್ತೆ ಹೆಚ್ಚು ಬೇಕೆಂದು ಅವರ ಬೇಡಿಕೆ.

## ಸಿಂಧ

ಪಾರ್ಸಿ ಸಂಘವು ನಿಶ್ಚಿತವಾಗಿ ಕಾಂಗ್ರೆಸ್ಸಿಗೆ ಸಂಬಂಧಿಸಿರುವದಿಲ್ಲ ಎಂಬುದಾಗಿ ಬ್ಯಾ. ಜಿನ್ನಾರವರು ಹೇಳಿದ್ದನ್ನು ಪಾರ್ಸಿಗಳ ಪ್ರಮುಖರಾದ ಆರ್. ಕೆ. ಸಿಧ್ವಾರವರು ಖಂಡಿಸಿದ್ದಾರೆ. ಪಾರ್ಸಿಗಳು ಎಂದಿನಿಂದಲೂ ಕಾಂಗ್ರೆಸ್ಸಿಗೆ ಅನುಕೂಲರಿರುವರೆಂಬುದಾಗಿ ಸಿಧ್ವಾರವರು ಉದಾಹರಣೆಗಳಿಂದ ಸಿದ್ಧಮಾಡಿದ್ದಾರೆ.

ಘಟನಾ ಸಮಿತಿಗೆ ಬಲುಚಿಸ್ತಾನದಿಂದ ಆರಿಸಿ ಬಂದ ನವಾಬ ಮಹಮ್ಮದಖಾನರ ವಿರುದ್ಧ ಖಾನ ಅಬ್ದುಲ್ ಸಮಾದಖಾನರು ತಕರಾರು ಅರ್ಜಿ ಮಾಡಿದ್ದಾರೆ. ನವಾಬರು ಬ್ರಿಟಿಶ್ ಬಲುಚಿಸ್ತಾನದ ನಿವಾಸಿಗಳಲ್ಲೆಂದೂ ಅವರು ಸರಕಾರದಿಂದ ವೈಯಕ್ತಿಕ ಸಂಬಳ ಪಡೆಯುತ್ತಿರುವರೆಂದೂ ಅದುದರಿಂದ ಘಟನಾ ಸಮಿತಿಯ ಪ್ರತಿನಿಧಿಗಳಾಗಲು ಅವರು ಅನರ್ಹರೆಂದೂ ವಾದಿಸಲಾಗಿದೆ. ಅಗಸ್ಟ ೨೬ ಕ್ಕೆ ಕ್ವೆಟ್ಟಾ ಸೆಶನ್ಸ ಜಜ್ಜರು ಇದರ ವಿಚಾರಣೆ ನಡೆಸುವರು.

ಸಿಂಧ ಶಾಸನ ಸಭೆಯ ಸದಸ್ಯರಾದ ನೇವೆಂದ್ರಮ ವಿಶಿನದಾಸ ಇವರು ತಮ್ಮ ಕೆಲಸದಲ್ಲಿ ಅಡ್ಡಿಮಾಡಿದರೆಂದು ನವಾಬಶಾ ಜಿಲ್ಹಾ ಮ್ಯಾಜಿಸ್ಟ್ರೇಟರು ಪಿನಲ್‌ಕೋಡಿನ ೨೨೮ ನೇ ಕಲಮಿನನ್ವಯ ಜಾಮೀನಿಲ್ಲದ ವಾರಂಟು ಹೊರಡಿಸಿರುವದು. ಹಿಂದು ಕನ್ಯೆಯೊಬ್ಬಳ ಅಪಹಾರ ಸಂಬಂಧದಲ್ಲಿ ನೇವೆಂದ್ರಮ್ಮನವರು ಶಿಷ್ಟಮಂಡಳ ಒಯ್ದಿದ್ದರಂತೆ. ಟೆಲಿಫೋನ ಮೂಲಕ ಕರೆ ಬಂದದ್ದರಿಂದ ನಿಚಲದಾಸ ವಜಿರಾಣಿಯವರು ನವಾಬಶಾಕ್ಕೆ ಹೋದರು.

## ಪಂಜಾಬ

ರಾವಳಪಿಂಡಿ ಮುಸ್ಲಿಂ ಲೀಗಿನ ಅಧ್ಯಕ್ಷ ಶೇಖ ಮಹಮ್ಮದ ಉಮ್ಮರರು ಹೋರಾಟ ದಿನದ ಸಭೆಯಲ್ಲಿ ಮಾತಾಡುತ್ತ ಪಾಣೀಪತ್ತ ಕಾಳಗದಲ್ಲಿ ಮರಾಠರೊಡನೆ ಹೋರಾಡಿದಂತೆ ಮುಸಲ್ಮಾನರು ಈಗ ಕಾಂಗ್ರೆಸ್ಸಿನೊಡನೆ ಹೋರಾಡುವರೆಂದು ಹೇಳಿದರು.

ಘಟನಾ ಸಮಿತಿಗೆ ಆರಿಸಿ ಬಂದಿರುವ ಲೀಗ ಸದಸ್ಯರ ಆಸನಗಳ ಸಂಬಂಧದಲ್ಲಿ ಹಿಂದುಸ್ತಾನ ಸರಕಾರದವರು ಮಮದೋತ ನವಾಬರಿಗೆ ಕೇಳಿದ್ದರು. ಲೀಗಿನವರು ಘಟನಾ ಸಮಿತಿಯನ್ನು ಬಹಿಷ್ಕರಿಸಿದ್ದರಿಂದ ಆ ಪ್ರಶ್ನೆ ಉದ್ಭವಿಸುವದಿಲ್ಲೆಂದು ಅದಕ್ಕೆ ನವಾಬ ಸಾಹೇಬರು ತಿಳಿಸಿರುವರು.

## ಸಂಯುಕ್ತಪ್ರಾಂತ

ಸಾದೀಕ ಅಲ್ಲಿಯವರು ಏ ಆಯ ಸಿ ಸಿಯ ಕಾಯಂ ಕಾರ್ಯದರ್ಶಿಗಳೆಂದು ಅಧ್ಯಕ್ಷರಿಂದ ನೇಮಕ ಹೊಂದಿದ್ದಾರೆ.

ಸಂಯುಕ್ತಪ್ರಾಂತ ಸರಕಾರದವರು ಪ್ರಾಂತದಲ್ಲಿಯ ಎಲ್ಲ ಜಮೀನದಾರಿ ಭೂಮಿಗಳನ್ನು ಕೋರ್ಟ ಆಫ ವಾರ್ಡ್ಸದ ನಿಯಂತ್ರಣದಲ್ಲಿ ತರುವ ವಿಚಾರ ನಡೆಸಿದ್ದಾರೆ

## ಬಿಹಾರ

ಗಯಾದಲ್ಲಿ ೨೦ ನೇ ತಾರೀಕು ಸಂಜೆಗೆ ಅಲ್ಲಲ್ಲಿ ಇರಿತಗಳು ಸಂಭವಿಸಿ ೫ ಗಾಯಾಳುಗಳು ಆಸ್ಪತ್ರೆಗೆ ಹಾಕಲ್ಪಟ್ಟರು. ಅವರಲ್ಲಿ ಒಬ್ಬನು ಆಸ್ಪತ್ರೆಯಲ್ಲಿ ಸತ್ತನೆಂದು ಸುದ್ದಿ ಬಂದಿದೆ. ೧೪೪ ನೇ ಕಲಮು ಹೊರಡಿಸಲಾಗಿದೆ. ಕರ್ಫ್ಯು ಕಟ್ಟಳೆಯನು ಜಾರಿಯಲ್ಲಿ ತರಲಿದ್ದಾರೆ. ಪುಂಡರನ್ನು ಬಂಧಿಸುವದು ನಡೆದಿದೆ. ಶಾಂತತಾ ಸಮಿತಿಗಳು ಸ್ಥಾಪಿತವಾಗಲಿರುವವು.

ಬಿಹಾರ ಸರಕಾರದವರು ಬಿಹಾರ ಒಕ್ಕಲಿಗೇತರ ಗ್ರಾಮಾಂತರ ಹೊಲ ಸಾಗುವಳಿ ಮಸೂದೆಯೊಂದನ್ನು ಬರುವ ಶಾಸನ ಸಭೆಯ ಅಧಿವೇಶನದಲ್ಲಿ ಮಂಡಿಸಲಿರುವರು. ಹೊಲಗಳಿಲ್ಲದ ಕೂಲಿಕಾರರ ಹಿತವನ್ನುದ್ದೇಶಿಸಿಯೇ ಈ ಮಸೂದೆ ಸಿದ್ಧಪಡಿಸಲಾಗಿದೆ.

## ಬಂಗಾಲ

ಕಲಕತ್ತೆಯ ದೊಂಬಿಯ ಪರಿಣಾಮವಾಗಿ ಶಾಸನಸಭೆಯನ್ನು ಸಪ್ಟಂಬರ ೨ ಕ್ಕೆ ಮುಂದರಿಸಬೇಕಾಯಿತು. ೨೦ ನೇ ತಾರೀಕ ಸಭೆ ಸೇರಿದಾಗ ಕೇವಲ ಇಬ್ಬರೇ ಸದಸ್ಯರು ಸಭೆಗೆ ಬಂದಿದ್ದರು. ಅದುದರಿಂದ ಅಧ್ಯಕ್ಷರು ಅಧಿವೇಶನವನ್ನು ಮುಂದಕ್ಕೆ ಹಾಕಿದರು.

## ಸಂಸ್ಥಾನಗಳು

ಕೊಲ್ಹಾಪುರದಲ್ಲಿ ಯುದ್ಧೋತ್ತರ ಯೋಜನೆಯ ಸಂಬಂಧದ ವಿಚಾರಕ್ಕಾಗಿ ಪ್ರೊ. ಜೆ. ಸಿ. ಕುಮಾರಪ್ಪನವರು ಮುಂದಿನ ತಿಂಗಳು ಕೊಲ್ಹಾಪುರಕ್ಕೆ ಬರಲಿರುವರು.

ಶ್ರೀ ಡಿ ಆರ್ ಘೋರಪಡೆಯವರು [illegible] ಪ್ರಜಾ ಪರಿಷತ್ತಿನ ಪಾರ್ಲಮೆಂಟರಿ ಬೋರ್ಡಿನ ಕಾರ್ಯದರ್ಶಿಗಳಾಗಿ ನೇಮಿಸಲ್ಪಟ್ಟಿರುವರು.

ಜತ್ತ ಸಂಸ್ಥಾನ ಪ್ರಜಾ ಪರಿಷತ್ತಿನ ಮೊದಲನೆ ಅಧಿವೇಶನ ಎಂ ಕೆ ಬಾಗಲರ ಅಧ್ಯಕ್ಷತೆಯಲ್ಲಿ ಸಪ್ಟೆಂಬರ ೮ ಕ್ಕೆ ಜತ್ತದಲ್ಲಿ ಕೂಡುವದು.

ಕೊಲ್ಹಾಪುರ ಸರಕಾರದವರು ಪ್ರಕಟನೆಯೊಂದನ್ನು ಹೊರಡಿಸಿ ವಳವಡಿಯ ಶಿಬಿರದಲ್ಲಿರುವ ಪೋಲಿಶ್ ನಿರಾಶ್ರಿತರು ತಮ್ಮ ಶಿಬಿರದ ಹೊರಗಿನ ಪೇಟೆಗಳಲ್ಲಿ ತತ್ತಿ ಹಾಲು ಕಾಯಿಪಲ್ಲೆ ಹಣ್ಣು ಮಾಂಸ ಸಕ್ಕರೆ ಆಹಾರ ಧಾನ್ಯ ಚಿಮಣಿ ಎಣ್ಣೆ ಬಟ್ಟೆ ಮತ್ತು ಸೌದೆ ಕೊಂಡುಕೊಳ್ಳತಕ್ಕದ್ದಲ್ಲೆಂದು ಪ್ರತಿಬಂಧಿಸಿದ್ದಾರೆ.

ವರಂಗಲ್ಲಿನಲ್ಲಿ ಇದೇ ೧೧ ನೇ ತಾರೀಕು ಜಾತೀಯ ದೊಂಬಿ ಸಂಭವಿಸಿ ಒಬ್ಬನು ಮರಣಹೊಂದಿ ೩೧ ಜನ ಗಾಯಗೊಂಡಿರುವರು. ಅವರಲ್ಲಿ [illegible] ವರಿಗೆ ತೀವ್ರ ಗಾಯಗಳಾಗಿವೆ. ಕಾಯ್ದೆಯ ಸಶಸ್ತ್ರ ಪೋಲೀಸರು ಹೈದರಾಬಾದಿನಿಂದ ಅಲ್ಲಿಗೆ ಸಾಗಿಸಲ್ಪಟ್ಟರು. ಪರಿಸ್ಥಿತಿ ಬೇಗ ಹಿಡಿತದಲ್ಲಿ ತರಲ್ಪಟ್ಟಿತು. ದೊಂಬಿಯ ಕಾರಣವನ್ನು ಶೋಧಿಸಲಾಗುತ್ತದೆಂದು ಮುಂತಾಗಿ ಹೈದ್ರಾಬಾದ ಸಂಸ್ಥಾನ ಸುದ್ದಿ ಖಾತೆಯವರು ಪ್ರಕಟಿಸುತ್ತಾರೆ.

ಕುಮಾರ ಶರಚ್ಚಂದ್ರ ಚಿಂತಾಮಣ ಘೋರ್ಪಡೆ ಇವರು ಇಚಲಕರಂಜಿ ಜಾಗೀರಿಯ ಉತ್ತರಾಧಿಕಾರಿಗಳೆಂದು ಕೊಲ್ಹಾಪುರ ರೀಜನ್ಸಿ ಕೌನ್ಸಿಲ್ಲಿನವರು ನಿರ್ಣಯಿಸಿ ಗ್ಯಾಜಿಟ ಹೊರಡಿಸಿದ್ದಾರೆ.





# ಕಲಕತ್ತೆಯಲ್ಲಿ ಹತ್ಯಾಕಾಂಡ

## ೨೦೦೦ ಜನರ ಮರಣ, ಅಸಂಖ್ಯ ಜನರಿಗೆ ಗಾಯ

## ಕೋಟ್ಯವಧಿ ರೂಪಾಯಿಗಳ ಹಾನಿ

ಅಖಿಲ ಭಾರತ ಮುಸ್ಲಿಂ ಲೀಗಿನವರು ಇದೇ ೧೬ ನೇ ತಾರೀ. ಹೋರಾಟ ದಿನವನ್ನಾಚರಿಸಿದರು. ಬಂಗಾಲದಲ್ಲಿಯ ಮುಸ್ಲಿಂ ಲೀಗ ಮಂತ್ರಿಮಂಡಳವು ಅಂದು ಸಾರ್ವಜನಿಕ ಬಿಡುವು ಕೊಟ್ಟಿದ್ದಿತು. ೧೬ ನೇ ತಾರೀಕಿನ ಹರತಾಳದಲ್ಲಿ ಯಾರನ್ನೂ ಒತ್ತಾಯಪಡಿಸಲಾಗುವುದಿಲ್ಲೆಂದು ಬಂಗಾಲ ಸರಕಾರ ಶಾಸನಸಭೆಯಲ್ಲಿ ಆಶ್ವಾಸನ ಕೊಟ್ಟಿದ್ದಿತು. ಆದರೆ ಅಂದು ಮುಂಜಾನೆ ಕಲಕತ್ತೆಯಲ್ಲಿ ಅಂಗಡಿ ಮುಚ್ಚದಿದ್ದವರ ಅಂಗಡಿಗಳನ್ನು ಒತ್ತಾಯದಿಂದ ಮುಚ್ಚಿಸಲಾಯಿತು. ಅಧಿಕಾರಿಗಳು ತಡೆಯಲಿಲ್ಲ. ಸಾಯಂಕಾಲ ಜಾಹೀರ ಸಭೆ ಮುಗಿಸಿಕೊಂಡು ಮರಳುವಾಗ ಪುಂಡರು ಹತ್ಯಾಕಾಂಡವನ್ನು ಪ್ರಾರಂಭಿಸಿದರು. ಬೀದಿಗಳಲ್ಲಿ ೧೬ ನೇ ತಾರೀಕು ನಡೆದ ದುರ್ಘಟನೆಗಳಲ್ಲಿ ೧೫ ಜನ ಮರಣ ಹೊಂದಿ ೨೫೦ ಜನ ಗಾಯಗೊಂಡರು. ಇರಿತದ ಗಾಯಗಳೇ ಹೆಚ್ಚಾಗಿದ್ದವು. ಬಂಗಾಲ ಪ್ರಾಂತಿಕ ಕಾಂಗ್ರೆಸ ಕಮಿಟಿ ಕಚೇರಿಯ ಮೇಲೆ ಕಲ್ಲುಗಳ ಸುರಿಮಳೆ ನಡೆಯಿತು. ಟ್ರಾಮುಗಳ ಓಡಾಟ ಕಟ್ಟಾಯಿತು. ರಾತ್ರಿಯಾಗುತ್ತ ನಡೆದಂತೆ ಮರಣ ಸಂಖ್ಯೆ ಹೆಚ್ಚುತ್ತ ನಡೆಯಿತು. ರಾತ್ರಿ ೧೧ ಗಂಟೆಗೆ ಬೇರೆ ಬೇರೆ ಆಸ್ಪತ್ರೆಗಳಿಂದ ಬಂದ ವರದಿಗಳಿಂದ ೮೦ ಜನ ಮರಣ ಹೊಂದಿದ್ದು ೮೫೫ ಜನರಿಗೆ ಗಾಯಗಳಾದವೆಂದು ತಿಳಿಯಿತು.

೧೮ ನೇ ತಾರೀಕಿಗೆ ಬಂದ ವರದಿ ಇದಕ್ಕೂ ಭಯಾನಕವಾಗಿದ್ದಿತು. ೨೦೦ ಜನ ಮರಣ ಹೊಂದಿದ್ದು ೧೩೦೦ ಜನರಿಗೆ ಗಾಯಗಳಾದ ಸುದ್ದಿ ಬಂದಿತು. ಅನೇಕ ಅಂಗಡಿಗಳು ಮತ್ತು ಮನೆಗಳು ಲೂಟಿ ಮಾಡಲ್ಪಟ್ಟವು. ಡಾ. ಬಿಧನಚಂದ್ರ ರಾಯ ಇವರ ಮನೆಯ ಮೇಲೆ ದಾಳಿ ಮಾಡಲಾಯಿತು. ಬೆಂಕಿ ಹಚ್ಚುವ ಪ್ರಯತ್ನವೂ ನಡೆಯಿತು. ಆದರೆ ಕೂಡಲೆ ಅದನ್ನು ಆರಿಸಲಾಯಿತು. ಹಿಂದುಸ್ತಾನ ಸ್ಟಾಂಡರ್ಡ ಕಚೇರಿಯ ಮೇಲೆಯೂ ದಾಳಿ ನಡೆಯಿತು. ನಗರದ ಬೇರೆ ಬೇರೆ ಭಾಗಗಳಲ್ಲಿ ಇರಿತಗಳು ಬೆಂಕಿ ಹಚ್ಚುವದು ಮೊದಲಾದ ಹೀನಕೃತ್ಯಗಳು ನಡೆದವು.

ಬ್ಯಾ. ಜಿನ್ನಾರು ಪ್ರಕಟನೆಯೊಂದನ್ನು ಹೊರಡಿಸಿ ಕಲಕತ್ತೆಯಲ್ಲಿ ಸಂಭವಿಸಿದ ಹಿಂಸಾತ್ಮಕ ಕೃತ್ಯಗಳನ್ನು ನಿರ್ದಾಕ್ಷಿಣ್ಯವಾಗಿ ಖಂಡಿಸಿದ್ದಾರೆ. ಅನ್ಯಾಯಕ್ಕೀಡಾದವರಿಗೆ ಸಂಪೂರ್ಣ ಸಹಾನುಭೂತಿಯನ್ನು ಪ್ರದರ್ಶಿಸಿರುವರು. ಈ ಘಟನೆಗೆ ಕಾರಣರಾದ ಪುಂಡರನ್ನು ದಂಡಿಸಲಿಬೇಕು. ಲೀಗ ಶತ್ರುಗಳ ಹಸ್ತಕರಾಗಿ ಇವರು ಆ ರೀತಿ ವರ್ತಿಸಿದ್ದಾರೆಂದು ಯಾರಿಗೂ ಹೊಳೆಯದಿರದು. ಶಾಂತರೀತಿಯಿಂದ ಹೋರಾಟ ದಿನವನ್ನಾಚರಿಸಬೇಕೆಂಬ ಲೀಗಿನ ಆಜ್ಞೆಯನ್ನು ಮುಸ್ಲಿಂರಾದರೂ ಮುರಿದಿದ್ದರೆ ಪ್ರಾಂತಿಕ ಮುಸ್ಲಿಂ ಲೀಗು ಅವರ ವಿರುದ್ಧ ಕ್ರಮವನ್ನು ಕೈಕೊಳ್ಳದಿರದೆಂದು ಈ ಪ್ರಕಟನೆಯಲ್ಲಿ ಜಿನ್ನಾರವರು ಅಭಿಪ್ರಾಯಪಟ್ಟಿದ್ದಾರೆ.

ಮರಣ ಸಂಖ್ಯೆ ಹಾಗೆಯೆ ಹೆಚ್ಚುತ್ತ ೧೮ ನೇ ತಾರೀಕು ರಾತ್ರಿ ೬೦೦ ವರೆಗೆ ಮುಟ್ಟಿತು. ಗಾಯಾಳುಗಳ ಸಂಖ್ಯೆ ೨೫೦೦ ಕ್ಕೇರಿತು. ಬಾಲಿಯಾಗಂಜದಲ್ಲಿ ಬಾಂಡೆಲ್ ಬೀದಿಯಲ್ಲಿ ಸೀಖರು ಕಠಾರಿಗಳಿಂದ ಸಜ್ಜಾಗಿ ಮೆರವಣಿಗೆ ಹೊರಡಿಸಿದ್ದರು. ಅವರಿಗೂ ಮುಸಲ್ಮಾನರಿಗೂ ತಿಕ್ಕಾಟ ಸಂಭವಿಸಿತು. ಪೋಲೀಸರು ಹೋಗಿ ಗೋಳೀಬಾರ ಮಾಡಿ ಜನರನ್ನು ಚದುರಿಸಿದರು. ಬಂಗಾಲ ಸರಕಾರದವರು ಪ್ರಕಟನೆಯೊಂದನ್ನು ಹೊರಡಿಸಿ ೧೬ ನೇ ತಾರೀಕು ಮುಂಜಾನೆ ೭ ಗಂಟೆಗೆ ಮಾಣಿಕತೋಲಾಭಾಗದಲ್ಲಿ ಗಲಭೆ ಸುರುವಾಗಿ ಹಿಂದೂ ಮುಸಲ್ಮಾನರು ನೆರೆಹೊರೆಯಲ್ಲಿ ಇರುವ ಭಾಗಗಳಿಗೆ ಕ್ರಮೇಣ ಹಬ್ಬಿತು. ಕೊಲೆ ಸುಲಿಗೆಗಳೂ ನಡೆದವು ಎಂದು ಮುಂತಾಗಿ ಅದರಲ್ಲಿ ಉಲ್ಲೇಖಿಸಿರುವರು. ಗವರ್ನರರು ಆಕಾಶವಾಣಿಯಲ್ಲಿ ಭಾಷಣ ಮಾಡುತ್ತ ಪುಂಡಾಟಿಕೆಯನ್ನು ನಿಷೇಧಿಸಿ ಪುಂಡರ ವಿರುದ್ಧ ತಕ್ಕ ಕ್ರಮ ತೆಗೆದುಕೊಳ್ಳಲಾಗುವದೆಂದು ಹೇಳಿದರು. ಬೇರೆ ಬೇರೆ ಪಕ್ಷ ಪ್ರಮುಖರು ಪ್ರಕಟನೆಯನ್ನು ಹೊರಡಿಸಿ ಹಿತೋಪದೇಶ ಮಾಡಿದರು.]

೧೯ ನೇ ತಾರೀಕಿಗೆ ಮರಣ ಸಂಖ್ಯೆ ೨—೩ ಸಾವಿರಕ್ಕೆ ಮುಟ್ಟತೆಂದು ಅಲ್ಲಿನ ವಿಚಾರಣೆಯಿಂದ ಗೊತ್ತಾಯಿತು. ಗಾಯಾಳುಗಳ ನಿಶ್ಚಿತ ಸಂಖ್ಯೆ ತಿಳಿಯಲಿಲ್ಲ. ಅನೇಕ ಸಹಸ್ರ ಜನರು ಗಾಯಗೊಂಡರೆಂದು ಸ್ಟೇಟ್ಸಮನ್ ಪತ್ರಿಕೆ ಬರೆಯಿತು. ಭಾರತ ಪತ್ರಿಕೆಯ ವರದಿಯನ್ವಯ ೧೮ ನೇ ತಾರೀಕು ಒಂದೇ ದಿನ ೧೦೦ ಜನ ಇರಿತ ಹಾಗೂ ಗೋಳೀಬಾರಿನಿಂದ ಸತ್ತಿದ್ದು ೪೦೦ ಜನ ಗಾಯಗೊಂಡಿರುವರು.

ಆದರೆ ೨೦ ನೇ ತಾರೀಕಿಗೆ ಅ. ಭಾ. ಹಿಂದು ಮಹಾಸಭೆಯ ಜನರಲ್ ಸೆಕ್ರೆಟರಿಗಳು ವಾಯಿಸರಾಯರಿಗೆ ಕಳಿಸಿದ ತಂತಿಯಲ್ಲಿ – ಗಲಭೆಯಲ್ಲಿ ೫೦೦೦ ಜನ ಸತ್ತಿದ್ದು ಸ್ವತಃ ಬಂದು ಪರಿಸ್ಥಿತಿಯನ್ನು ಪರಿಶೀಲಿಸಿರೆಂದು ಬಿನ್ನವಿಸಿರುವರು. ೨ಲ್ಲದೆ ಈ ದುರಂತಕ್ಕೆ ಮುಖ್ಯ ಮಂತ್ರಿ ಸುರವರ್ದಿಯವರೇ ಕಾರಣರೆಂದು ತಿಳಿಸುವರು. ಮುಸ್ಲಿಂ ಲೀಗಿಗೆ ಗೆಳೆತನ ತೋರಿಸುವ ಸ್ಟೇಟ್ಸಮನ್ ಪತ್ರಿಕೆಯೇ ಸುಹ್ರವರ್ದಿ ಮಂತ್ರಿಮಂಡಲವನ್ನು ಮನೆಗೆ ಕಳಿಸಬೇಕೆಂದು ಬರೆದಿದೆ. ಮೂರು ದಿನಗಳ ಹತ್ಯಾಕಾಂಡದ ದೃಶ್ಯಗಳು ಅತ್ಯಂತ ಹೃದಯದ್ರಾವಕವಾಗಿವೆ. ೧೯ ನೇ ತಾರೀಕಿನಿಂದ ಪರಿಸ್ಥಿತಿ ಸ್ವಲ್ಪ ಸುಧಾರಿಸಿದೆ.

## ಕಾಂಗ್ರೆಸ ಮುಖಂಡರ ಪ್ರಕಟನೆ

ಕಾಂಗ್ರೆಸ ಅಧ್ಯಕ್ಷ ಪಂ. ಜವಾಹರಲಾಲರು ಈ ಸಂಬಂಧದಲ್ಲಿ ಇಂತು ಅಭಿಪ್ರಾಯಪಟ್ಟಿದ್ದಾರೆ. ಸಂಘಟಿತ ಪ್ರಯತ್ನವಿಲ್ಲದೆ ಕಲಕತ್ತೆಯಲ್ಲಿ ಸಂಭವಿಸಿದಂಥ ಘಟನೆಗಳು ಸಂಭವಿಸಲಾರವು. ಅಲ್ಲಿನ ಸರಕಾರ ಸಾಕಷ್ಟು ಸಮರ್ಥವಾಗಿಲ್ಲ. ಈಗ ಅದೊಂದು ಸರಕಾರವೇ ಎಂದು ಯಾರಿಗಾದರೂ ಸಂದೇಹ ಬರುವದು. ಬಂಗಾಲ ಸಿಂಧಗಳಲ್ಲಿಯ ಮಂತ್ರಿಗಳು ಮಾಡಿದ ಭಾಷಣಗಳು ಆಶ್ಚರ್ಯಕಾರಕ ರೀತಿಯಲ್ಲಿ ಹೊಣೆಗೆಟ್ಟವಾಗಿವೆ.

ಮೌಲಾನಾ ಆಜಾದರು ಕಲಕತ್ತೆಯಲ್ಲಿ ಸಂಭವಿಸಿದ ಘಟನೆಗಳ ಹೊಣೆಯನ್ನೆಲ್ಲ ಬಂಗಾಲ ಮಂತ್ರಿಮಂಡಳವೇ ಹೊರಬೇಕೆಂದು ಸ್ಪಷ್ಟವಾಗಿ ಹೇಳಿದ್ದಾರೆ. ಸರಕಾರದವರು ೧೬ ನೇ ತಾರೀಕಿನ ದಿನ ಮುಂಜಾನೆ ೧೪೪ ಕಲಮು ಜಾರಿ ಮಾಡಿದ್ದರೆ ದಂಗೆಯೇ ಸಂಭವಿಸುತಿರಲಿಲ್ಲ. ಕೊನೆಯ ಪಕ್ಷಕೆ ಅಂದು ಸಂಜೆಗಾದರೂ ಜಾರಿ ಮಾಡಿದ್ದರೆ ಸಾವಿರಾರು ಜನರ ಪ್ರಾಣವುಳಿಯುತ್ತಿತ್ತು. ಬಹುಮೂಲ್ಯ ವಸ್ತುಗಳ ರಕ್ಷಣೆಯಾಗುತಿತ್ತು ಎಂದು ಅವರು ಅಭಿಪ್ರಾಯಪಟ್ಟಿರುವರು.

ಕಮ್ಯುನಿಸ್ಟ ಮುಖಂಡರಾದ ಪಿ ಸಿ ಜೋಶಿಯವರು ಲೀಗಿನ ಈ ಹೋರಾಟ ಬ್ರಿಟಿಶರ ಸಾಮ್ರಾಜ್ಯವಾದದ ವಿರುದ್ಧವಿರದೆ ಹಿಂದುಗಳ ವಿರುದ್ಧವಿರುವದರಿಂದ ಅದಕ್ಕೂ ತಮಗೂ ಯಾವ ಸಂಬಂಧವೂ ಇಲ್ಲೆಂದು ಸಾರಿದ್ದಾರೆ.

## ಇಂಗ್ಲಂಡದಲ್ಲಿ ಕಳವಳ

ಈ ಗಲಭೆಗಳನ್ನನುಲಕ್ಷಿಸಿ ಬಂಗಾಲದಲ್ಲಿಯ ಮುಸ್ಲಿಂ ಲೀಗಿನ ಮಂತ್ರಿಮಂಡಳದ ಭವಿತವ್ಯದ ವಿಷಯವಾಗಿ ಲಂಡನದಲ್ಲಿಯ ರಾಜಕೀಯ ವರ್ಗದವರು ತೀವ್ರಚರ್ಚೆ ನಡೆಸಿರುವರು ಸುಹ್ರವರ್ದಿ ಮಂತ್ರಿಮಂಡಳದವರು ಪರಿಸ್ಥಿತಿಯನ್ನು ನಿಯಂತ್ರಿಸಲು ತಪ್ಪಿ ಪ್ರಾಂತದ ಆಡಳಿತ ಸಾಗಿಸಿಕೊಂಡು ಹೋಗಲು ತಾವು ಸಮರ್ಥರಿಲ್ಲೆಂದು ತೋರಿಸಿದ್ದಾರೆಂಬ ಅಭಿಪ್ರಾಯ ಬಲಗೊಳ್ಳುತ್ತ ನಡೆದಿದೆ. ೧೯೪೩ ನೇ ಇಸ್ವಿಯಲ್ಲಿ ಸಂಭವಿಸಿದ ಬರಗಾಲದಲ್ಲಿ ಆದ ೩ಲಕ್ಷ ಜನರ ಆಹುತಿಗೆ ಲೀಗ ಮಂತ್ರಿಮಂಡಳದ ದುರ್ಬಲ ಆಡಳಿತವೇ ಕಾರಣವೆಂದು ಈಗ ಸ್ಮರಿಸಲಾಗುತ್ತದೆ. ಕಲ್ಕತ್ತೆಯಲ್ಲಿ ಈ ಅಶಾಂತಿಯನ್ನು ಹತ್ತಿಕ್ಕಲು ಕೂಡಲೇ ಉಪಾಯ ಕೈಕೊಳ್ಳಬೇಕೆಂದು ಭಾರತ ಮಂತ್ರಿಗಳಿಗೆ ಕೇಳಿಕೊಳ್ಳಲಾಗಿದೆ.

೨೧ ನೇ ತಾರೀಕಿನ ದಿವಸ ಸುಹ್ರವರ್ದಿಯವರು ಪ್ರಕಟನೆಯೊಂದನ್ನು ಹೊರಡಿಸಿ ನಗರದಲ್ಲಿ ಶಾಂತತೆಯನ್ನು ಸ್ಥಾಪಿಸಲು ಸರಕಾರ ಎಲ್ಲ ಉಪಾಯ ಕೈಕೊಳ್ಳುವುದೆಂದೂ ಗಲಭೆಯ ಕಾರಣಗಳು ಹೊರಗಿನವರಿಗೆ ತಿಳಿಯುವದು ಸಾಧ್ಯವಿಲ್ಲೆಂದೂ ಮುಂತಾಗಿ ಹೇಳಿ ಶಾಂತಿರಕ್ಷಣೆಯಲ್ಲಿ ಎಲ್ಲರೂ ಸಹಕರಿಸಬೇಕೆಂದು ಕೇಳಿಕೊಂಡಿದ್ದಾರೆ.

ಟ್ರೇಡ ಯುನಿಯನ್ ಕಾಂಗ್ರೆಸ್ಸಿನ ಅಧ್ಯಕ್ಷ ಶ್ರೀ ಮೃಣಾಲಿಕಾಂತಿ ಬೋಸರು ಗವರ್ನರರನ್ನುದ್ದೇಶಿಸಿ ಬಹಿರಂಗ ಪತ್ರವನ್ನು ಬರೆದು ನಿಮ್ಮ ಇಚ್ಛವೆ ನೀವು ಯಾವ ಸರಕಾರದ ಧುರೀಣರೆಂದು ತಿಳಿಯಲಾಗುತ್ತದೆಯೊ ಆ ಸರಕಾರದಲ್ಲಿ ಜನತೆಯ ವಿಶ್ವಾಸವಿಲ್ಲೆಂದು ತಿಳಿಸಿದ್ದಾರೆ.

೨೧ ನೇ ತಾರೀಕು ಡಾಕಾ, ಬಂಡಾರ, ರಾಜೀಗಂಜ ಮೊದಲಾದ ಕಡೆಯಲ್ಲಿ ದೊಂಬಿ ಸಂಭವಿಸಿ ೫ ಜನರು ಮರಣ ಹೊಂದಿ ೩೫ ಜನರಿಗೆ ಗಾಯಗಳಾದ ಸುದ್ದಿ ಬಂದಿದೆ.

೨೨ ನೇ ತಾರೀಕು ಹಲವು ಕಡೆ ಕಿರುಕಳ ಹಲ್ಲೆ ನಡೆದರೂ ಪರಿಸ್ಥಿತಿ ಒಟ್ಟಾರೆ ಶಾಂತವಿದ್ದಿತು.



# ಕರ್ನಾಟಕದ "ಡೆಮಾಕ್ರಿಟಸ್"



ಕನ್ನಡ ನಾಡಿನ ಪ್ರಸಿದ್ಧ ಸಾಹಿತಿಗಳೂ ಈ ಸಲ ಮದ್ರಾಸ ಸಾಹಿತ್ಯ ಸಮ್ಮೇಲನದ ಅಧ್ಯಕ್ಷರೂ ಆದ ಶ್ರೀ. ಟಿ. ಪಿ. ಕೈಲಾಸಂ ಇವರ ಪ್ಲಾಸ್ಟರ ಪುತ್ಥಳಿ ಇದು. ಮುಂಬೈಯಲ್ಲಿರುವ ಕನ್ನಡ ಶಿಲ್ಪಿಗಳಾದ ಶ್ರೀ. ವರಬೇಡಿಯವರು ಇದನ್ನು ತಯಾರಿಸಿದ್ದಾರೆ. ಶ್ರೀ. ಕೈಲಾಸಂ ಅವರನ್ನು ಮೂರು ದಿನ ಕುಳ್ಳಿರಿಸಿಕೊಂಡು ಇದನ್ನು ರಚಿಸಿರುತ್ತಾರೆ. ತಮಗೆ ಡೆಮಾಕ್ರಿಟಿಸ್ ( Democritus ) ಎಂದು ಕರೆಯಬೇಕೆಂದು ಶ್ರೀ. ಕೈಲಾಸಂ ಅವರು ಇಚ್ಛಿಸಿದ್ದರಿಂದ ಆ ಹೆಸರನ್ನು ಪುತ್ಥಳಿಯ ಮೇಲೆ ಕೆತ್ತಲಾಗಿದೆ. ಶ್ರೀ. ವರಬೇಡಿಯವರ ಈ ಸುಂದರ ಕಲಾಕೃತಿಯನ್ನು ಅನೇಕರು ಮೆಚ್ಚಿರುವರು.

---

(೪ ನೇ ಪುಟದಿಂದ ಮುಂದರಿದುದು)

ನಾಲ್ಕಾರು ಪುಸ್ತಕ ಬರೆದು ಅಯಶಸ್ವಿಯಾಗಿ ಆ ಮೇಲೆ ಹಯಸ್ತ್ರೀಯನ್ನು ಒಲಿಸಿಕೊಂಡವರಲ್ಲವೆಲ್ಸರು ಎನ್ನುತ್ತಾರೆ ಶಾ. ಇದರಿಂದ ವೆಲ್ಸರ ಸ್ವಭಾವ ಕೋಮಲವಾಗಿಯೆ ಉಳಿದು ತಮ್ಮ ಮೇಲೆ ಯಾರಾದರೂ ಟೀಕೆ ಮಾಡಿದರೆ ಅವರು ಬಹಳ ವಿಷಣ್ಣರೂ ಕೋಪಾವಿಷ್ಟರೂ ಆಗುತಿದ್ದರಂತೆ ! ಆದರೆ ಅದೆಲ್ಲ ಗಳಿಗೆಯ ಕೋಪವೆಂದು ಶ್ಯಾ ಹೇಳುತ್ತಾರೆ.

ವೆಲ್ಸರು ಎರಡು ಸಲ ಮದುವೆಯಾಗಿದ್ದರು. ಮೊದಲನೆ ಹೆಂಡತಿ ಇಸಾಬೆಲ್ ಮೇರಿವೆಲ್ಸ ಅವರ ಸಂಬಂಧಿಕಳು. ಆದರೆ ಮುಂದೆ ವಿವಾಹವಿಚ್ಛೇದವಾಗಿ ತಮ್ಮ ಒಂದು ಕಾಲದ ಶಿಷ್ಯೆಯಾಗಿದ್ದ ಆಮಿ ಕೆಥರಿನ್ ರಾಬಿನ್ಸಳನ್ನು ಮದುವೆಯಾದರು. ಅವಳು ೧೯೨೭ ರಲ್ಲಿ ತೀರಿಕೊಂಡಳು. ಅವಳಿಂದ ಹುಟ್ಟಿದ ಪಿ. ಜಿ. ವೆಲ್ಸನು ಅವರಂತೆಯೆ ಪ್ರಾಣಿಶಾಸ್ತ್ರಾಭ್ಯಾಸಿಯಾಗಿದ್ದು Science of Life ಪುಸ್ತಕದ ರಚನೆಯಲ್ಲಿ ಅವರೊಡನೆ ಸಹಕರಿಸಿ ಪ್ರಸಿದ್ಧನಾಗಿದ್ದಾನೆ.

ಅಮೇರಿಕೆಗೆ ನಾಲ್ಕು ಬಾರಿ ಭೆಟ್ಟಿಯಿತ್ತ ವೆಲ್ಸರು ಥಿಯೊಡೋರ ರೂಸವೆಲ್ಟ, ಹೂವರ್, ಹಾಗು ಹಾರ್ಡಿಂಜ ಈ ಮೂವರು ಅಧ್ಯಕ್ಷರ ಅತಿಥಿಗಳಾಗಿದ್ದರು. ಮಾಸ್ಕೋಕ್ಕೆ ಹೋಗಿ ಸ್ಟಾಲಿನ್ನರ ಅತಿಥಿಯೂ ಆಗಿದ್ದರು.

ಪಾರ್ಲಿಮೆಂಟಿನಲ್ಲಿ ಪ್ರವೇಶಿಸಲು ಅವರು ಎರಡು ಬಾರಿ ಪ್ರಯತ್ನಿಸಿದರು. (೧೯೨೨ ಮತ್ತು ೧೯೨೩) ಆದರೆ ಎರಡೂಬಾರಿ ಅವರಿಗೆ ಅಪಯಶಸ್ಸು ಗಂಟು ಬಿತ್ತು. ಅಂದಿನಿಂದ ಅವರು ವ್ಯವಹಾರಿಕ ರಾಜಕಾರಣಕ್ಕೆ ಶರಣುಹೊಡೆದು ಲೇಖನಿಯಿಂದಲೇ ತಮ್ಮ ತತ್ವಗಳ ಪ್ರತಿಪಾದನೆಯನು ಮಾಡಲು ನಿರ್ಧರಿಸಿದರು.

## ಬೆಂಗಳೂರು-ಮೈಸೂರು

ಮೈಸೂರ ಮಹಾರಾಜರ ಜನ್ಮ ದಿನೋತ್ಸವ ನಿಮಿತ್ತ ಬಿರುದುಗಳನ್ನು ಪಡೆದ ದೇಶೋಪಕಾರಿಣಿ ಲೇಡಿ ತಂಬುಚೆಟ್ಟಿ, ರಾಜಸೇವಾ ಪ್ರಸಕ್ತ ಎಂ. ಎಸ್. ರಾಮಚಂದ್ರರಾವ್ ಮೊದಲಾದ ಮಹನೀಯರಿಗೆ ಮೈಸೂರು ನಗರ ಭವನದಲ್ಲಿ ಸಾರ್ವಜನಿಕ ಸನ್ಮಾನವನ್ನು (ತಾ-೧೪) ಏರ್ಪಡಿಸಲಾಗಿತ್ತು. ದಿವಾನ ರಾಮಸ್ವಾಮಿ ಮುದಲಿಯಾರರು ಅಧ್ಯಕ್ಷತೆ ವಹಿಸಿದ್ದರು.

ಬೆಂಗಳೂರ ನಗರಾಭಿವೃದ್ಧಿ ಸಭೆ ತಾ. ೧೯ಕ್ಕೆ ಮೊದಲನೆಯಬಾರಿ ಅಧಿಕಾರೇತರರ (ಶ್ರೀ ಸಿ. ಎನ್. ನರಸಿಂಗರಾಯರ) ಅಧ್ಯಕ್ಷತೆಯಲ್ಲಿ ಜರಗಿ ಮುಂದಿನ ಪ್ರತಿನಿಧಿ ಸಭಾಧಿವೇಶನದಲ್ಲಿ ಸರಕಾರದವರು ತರಬೇಕೆಂದಿರುವ ನಗರಾಭಿವೃದ್ಧಿ ಮಸೂದೆಯನ್ನು ಪರಿಶೀಲಿಸಲು ಶ್ರೀ ನರಸಿಂಗರಾವ್, ಡಾ. ಕೊನಿಗ್ಸಬರ್ಗರ್ ಹಾಗು ಶ್ರೀ ಬಿ. ಎನ್. ಗುಪ್ತ ಇವರನ್ನೊಳಗೊಂಡ ಉಪಸಮಿತಿಯನ್ನು ರಚಿಸಲಾಯಿತು.

ಬೆಂಗಳೂರಲ್ಲಿ ತಾ. ೧೬ ಕ್ಕೆ ಮುಸ್ಲಿಂಲೀಗಿನ ಹೋರಾಟ ದಿನವನ್ನು ಮೆರವಣಿಗೆ ಸಭೆಗಳೊಡನೆ ಆಚರಿಸಲಾಯಿತು. ಸಿಟಿ ಮಾರ್ಕೆಟ ಬಳಿ ಮೈಸೂರು ಸಂಸ್ಥಾನ ಮುಸ್ಲಿಂ ಲೀಗ್ ಅಧ್ಯಕ್ಷರಾದ ಮಹಮದ ಶರೀಫರು ಭಾಷಣಮಾಡಿ ಕಾಂಗ್ರೆಸ್ಸಿನಿಂದ ಮುಸ್ಲಿಮರ ಹಿತವಾಗದೆಂದೂ ಜಿನ್ನಾರ ನೇತೃತ್ವದಲ್ಲಿ ಪಾಕಿಸ್ತಾನವನ್ನು ಸಂಪಾದಿಸುವದೊಂದೇ ಮುಸ್ಲಿಮರಿಗೆ ನಿಸ್ತಾರೋಪಾಯವೆಂದೂ ಭಾಷಣ ಮಾಡಿದರು. ಸಭೆಯಲ್ಲಿ ಖಾನಬಹಾದ್ದೂರ ಅಬ್ಬಾಸ ಖಾನರು ತಮ್ಮ ಬಿರುದನ್ನು ತ್ಯಜಿಸಿದರು.

ಮೈಸೂರು ಕಸ್ತೂರಬಾ ನಿಧಿ ಸಮಿತಿಯ ಆಶ್ರಯದಲ್ಲಿ ತಾ. ೧೫ ಕ್ಕೆ ಶ್ರೀ ಜಿ ರಾಮಚಂದ್ರನ್ನರ ಅಧ್ಯಕ್ಷತೆಯಲ್ಲಿ ಕೂಡಿದ ಸಭೆಯ ಮುಂದೆ ಶ್ರೀಮತಿ ಸುಚೇತಾ ಕೃಪಲಾನಿಯವರು ಮೈಸೂರ ನಗರಭವನದಲ್ಲಿ ಭಾಷಣ ಮಾಡಿದರು. ಕಸ್ತೂರಬಾ ಅವರ ಅಮೋಘ ಸೇವೆಯನ್ನು ವಿವರಿಸಿ ಬಡತನ, ಅಜ್ಞಾನ, ರೋಗ ಇವುಗಳೇ ಈ ದೇಶದಲ್ಲಿ ಕ್ರಾಂತಿಗೆ ಕಾರಣವಾಗಿದ್ದು ಭಾರತದ ಮಹಿಳೆಯರ ಮತ್ತು ಹಳ್ಳಿಗಳ ಉದ್ಧಾರಕ್ಕಾಗಿ ಕಸ್ತೂರಬಾ ನಿಧಿಯ ಉಪಯೋಗವಾಗುತಿದೆಯೆಂದು ತಿಳಿಸಿದರು.

ಮೈಸೂರು ಬೆಂಗಳೂರ ಹಾಟೆಲ ಕೆಲಸಗಾರರ ಕೂಲಿಕಾರ ಸಂಘ ನೋಂದಣಿ ಹೊಂದಿದೆಯೆಂದು ಸಂಘದ ಕಾರ್ಯದರ್ಶಿ ಎಲ್. ರಾಮಕೃಷ್ಣರಾಯರು ಪ್ರಕಟಿಸಿದ್ದಾರೆ.

ಮೈಸೂರ ಸಂಸ್ಥಾನದಲ್ಲಿ ಅಕ್ಕಿಯ ಸಂಗ್ರಹ ಕಡಿಮೆಯಾಗಿರುವದರಿಂದ ಅಕ್ಕಿಯ ಸೀದಾ ಪ್ರಮಾಣವನ್ನು ತಗ್ಗಿಸಲಾಗಿದೆ.

ಭಟಕಳ ಬಂದರ ಹಾಗು ಬೆಂಗಳೂರ ದಂಡಿನ ಪ್ರದೇಶವನ್ನು ಮೈಸೂರಿಗೆ ತೆಗೆದುಕೊಳ್ಳುವ ವಿಚಾರ ಇನ್ನೂ ಪ್ರಥಮ ಘಟ್ಟದಲ್ಲಿದೆಯೆಂದು ಮೈಸೂರ ನಗರದ ವರ್ತಕರು ತಾ. ೧೨ ಕ್ಕೆ ದಿವಾಣ ರಾಮಸ್ವಾಮಿ ಮುದಲಿಯಾರರಿಗೆ ಕೊಟ್ಟ ಪಾನಪತ್ರ ಕೂಟದಲ್ಲಿ ದಿವಾಣರು ತಿಳಿಸಿದರು.

## ಬೆಂಗಳೂರು ಪತ್ರಿಕೆಗಳ ಮುಷ್ಕರ

### ವಿಶ್ವಕರ್ನಾಟಕದ ಮೇಲೆ ಕ್ರಮ ತೆಗೆದುಕೊಂಡದ್ದರ ನಿಷೇಧಾರ್ಥ

ಬೆಂಗಳೂರಿನ ವಿಶ್ವ ಕರ್ನಾಟಕ ಪತ್ರಿಕೆಯನ್ನು ಎರಡು ತಿಂಗಳ ಕಾಲ ನಿಲ್ಲಿಸಿದ ಸರಕಾರದ ಕೃತಿಯ ನಿಷೇಧಾರ್ಥ ತಾ ೨೦ಕ್ಕೆ ಎಲ್ಲ ಬೆಂಗಳೂರು ಪತ್ರಿಕೆಗಳು ಪ್ರಕಟನೆಯನ್ನು ನಿಲ್ಲಿಸಿದ್ದವು. ಪತ್ರಿಕೋದ್ಯೋಗಿಗಳೂ ಮೊಳೆಜೋಡಿಸುವವರೂ ಸೆರೆವಸೆಗೆ ತೆರಳಿದ್ದರು. ಆ ಮೇಲೆ ಅವರು ಸಭೆ ಸೇರಿ ಸಂಸ್ಥಾನಗಳಲ್ಲಿಯ ಪತ್ರಿಕೆಗಳಿಂದ ಠೇವು ತೆಗೆದುಕೊಂಡದ್ದನ್ನು ತಿರುಗಿ ಕೊಡಬೇಕೆಂದೂ ಪತ್ರಿಕೆಗಳಿಗೆ ಅನಿರ್ಬಂಧ ಸ್ವಾತಂತ್ರ್ಯವನ್ನು ಕೊಡಬೇಕೆಂದೂ ವಿನಂತಿಸುವ ಗೊತ್ತುವಳಿ ಮಾಡಿದರು.




### ಮುಂಬಯಿ ಶೇರ ಪೇಟೆ

ತಾ ೩೧

ಮುಂಬಯಿ ಶೇರ ಪೇಟೆ ಈ ವಾರವೆಲ್ಲ ಒಂದಲ್ಲ ಒಂದು ಕಾರಣದಿಂದ ಮುಚ್ಚಿದೆ. ಶೇರ ಪೇಟೆಯಲ್ಲಿ ಕಳೆದ ವಾರಗಳಿಂದ ತೆರಪಿಲ್ಲದೆ ಏರುತಿದ್ದ ಬೆಲೆಗಳಿಗೆ ಕಳೆದವಾರದಲ್ಲಿ ಅಡ್ಡಗಾಲು ಬಿದ್ದಿತೆಂದು ಹೇಳಬಹುದು. ಕಳೆದ ವಾರದ ವರದಿಯ ನಂತರ ಶುಕ್ರವಾರ ಒಂದೇ ದಿನ ಶೇರ ಪೇಟೆ ತೆರೆದಿದ್ದು ಆಗ ಟಾಟಾ ಡೆಪರ್ಡ ಹಾಗು ಡಾಯಿಂಗ ಪಾಲುಗಳು ತುಸು ಏರಿಕೆಯನ್ನು ತೋರಿಸಿ ಕ್ರಮವಾಗಿ ರೂ. ೩೬೧೨-೮-೦ ಮತ್ತು ೩೨೭೫-೦-೦ ರಲ್ಲಿ ಮುಗಿದವು. ಕೋಹಿನೂರಿಗೂ ಸ್ವಲ್ಪ ಲಾಭವಾಗಿ ೧೧೫೬-೦-೦ಕ್ಕೆ ಹೋಯಿತು. ಆದರೆ ಸ್ವದೇಶಿ, ಗೋಕಾಕ, ಸೆಂಟ್ರಲ ಇಂಡಿಯಾ ಪಾಲುಗಳು ಕೆಲ ರೂಪಾಯಿ ಕಳೆದುಕೊಂಡು ಕ್ರಮವಾಗಿ ರೂ. ೯೬೦-೦-೦, ೫೨೧-೦-೦ ಮತ್ತು ೫೧೫-೦-೦ಕ್ಕಿಳಿದವು. ಸೆಂಚೂರಿ ೧೨೫೦-೦-೦ ರಲ್ಲಿ ಯಥಾಸ್ಥಿತಿ. ಸಿಂಧ್ಯಸ್ಟೀಮ ೫೫-೮-೦ಗೂ ಅಸೋಸಿಯೇಟೆಡ ಸಿಮೆಂಟ್ಸ ೨೬೫-೮-೦ಕ್ಕೂ ಇಳಿದವು. ಬ್ಯಾಂಕ ಪಾಲುಗಳು ಕೂಡ ಇಳಿಮುಖವಾದವು. ಸೆಂಟ್ರಲ ಬ್ಯಾಂಕ ೧೯೫-೮-೦ ಇಂಪೀರಿಯಲ್ ಎಫ್. ಸಿ. ೩೨೧೫-೦-೦ ಮತ್ತು ರಿಝರ್ವ ಬ್ಯಾಂಕ ೧೬೪-೦-೦ ಕ್ಕೆ ಇಳಿದವು. ಆದರೆ ಸೋಮವಾರ ತಾ. ೧೯ಕ್ಕೆ ಪುನಃ ಶೇರ ಪೇಟೆಯಲ್ಲಿ ತೇಜಿ ಪ್ರವೃತ್ತಿ ಉಂಟಾಗಿ ಕ್ರಿಂದು ಅನಧಿಕೃತ ವ್ಯವಹಾರಗಳಿಂದ ತಿಳಿಯುತ್ತದೆ.

ಜಿ. ಪಿ. ನೋಟುಗಳು ೧೦೫-೧೪-೦ ಕ್ಕೆ ೧೯೪೭-೫೦ ರ ೩॥ ಸಾಲ ೧೦೨-೮-೦ ಕ್ಕಿಳಿದಿದ್ದವು.

### ಚಿನ್ನ-ಬೆಳ್ಳಿ

ಕಳೆದ ಶುಕ್ರವಾರ ತಯಾರಿ ಚಿನ್ನ ೯೭-೮-೦ ಕ್ಕೇರಿದ್ದರೂ ಮುಂದೆ ಅದು ೯೪-೨-೦ಕ್ಕಿಳಿದು ಹೋಯಿತು. ಆದರೆ ಮುಂದೆ ಅದು ತುಸು ಏರಿ ಇಂದು ೯೫-೩-೦ ರಲ್ಲಿ ನಿಂತಿದೆ. ಬೆಳ್ಳಿಯಾದರೂ ೧೬೭-೨-೦ ರಿಂದ ೧೬೪-೬-೦ ಕ್ಕಿಳಿದು ೧೬೭-೦-೦ ಕ್ಕೇರಿದೆ. ಸಾವರೀನ ೬೫-೮-೦

### ಅರಳೆಪೇಟೆ

ಅರಳೆಯ ಕನಿಷ್ಠ ಮತ್ತು ಪರಮಾವಧಿ ಧಾರಣೆಯನ್ನು ಏರಿಸಲು ಸರಕಾರ ಕೊನೆಗೆ ನಿರಾಕರಿಸಿಬಿಟ್ಟು ಅದು ಇದ್ದಂತೆಯೆ ಇರತಕ್ಕದೆಂದು ನಿರ್ಣಯಿಸಿ ಬಿಟ್ಟದ್ದರಿಂದ ವ್ಯಾಪಾರಿಗಳು ಏನೇನೂ ಧೈರ್ಯ ಮಾಡಲೊಲ್ಲರು. ಧಾರಣೆ ಏರಿಸಿದರೆ ಅತಿಪ್ರಸರಣ ಬೆಳೆದೀತೆಂದು ಸರಕಾರ ಭಯ ಪಟ್ಟದ್ದೆ ಪರಿಣಾಮವಾಗಿ ಹಿಂದೀ ಅರಳೆ ಧಾರಣೆ ವಿದೇಶೀ ಧಾರಣೆಗಳಿಗಿಂತ ನೂರಕ್ಕೆ ೨೧ ರಷ್ಟು ಕಡಿಮೆಯಿದ್ದರೂ ಬೆಲೆಗಳು ಇಳಿಯುತ್ತಲೆ ಹೋಗಿವೆ. ಸಪ್ಟೆಂಬರ ಅರಳೆ ೪೨೦-೮-೫ ರಲ್ಲಿ ಕನಿಷ್ಠ ದರ್ಜೆಯಲ್ಲಿ ನಿಂತಿದೆ.

### ಎಣ್ಣೆಕಾಳು

| | |
|---|---|
| ಶೇಂಗಾ | ೧೧೪-೦-೦ |
| ಅಗಸಿ | ೨೫-೦-೦ |
| ಅಗಸಿ ಎಣ್ಣೆ | ೧೪-೦-೦ |

### ಸಾಂಗಲಿ ಪೇಟೆ

| | |
|---|---|
| ಬೆಲ್ಲ ಬಂಗಾಲಿ ಮಣ ರೂ. | ೧೪-೧೬ |
| ಅರಿಷಣ ಹೇರು | ೮೦-೮೮ |
| ಶೇಂಗಾ ಖಂಡಿ ,, | ೯೦-೯೨ |
| ಮೆಣಸಿನಕಾಯಿ ಹೇರು ,, | ೧೮೦-೨೦೦ |
| ದೇಶಿ ತಂಬಾಕು ಹೇರು | ೧೦೦-೨೦೦ |
| ತಂಬಾಕ ಪಂಢರಪುರಿ ,, | ೧೫೦-೨೫೦ |
| ತಂಬಾಕು ಅಕೋಳ (ಹೇರು) | ೨೫೦-೩೭೫ |

### ಶಿವಮೊಗ್ಗೆ

ತಾ. ೧೩

| | |
|---|---|
| ಅಡಿಕೆ ದೇಶಾವರ ನಂ ೧ ಮಣ ೧ ಕ್ಕೆ | ೨೭-೩೧ |
| ,, ,, ೨ | ೨೬-೨೮ |
| ರಾಜಾ ಅಲವು | ೨೭-೩೦ |
| ನುಲಿ | ೨೯-೩೦ |
| ವಂಶಿ | ೨೦-೨೧ |
| ಬೆಟ್ಟೆ | ೧೭-೮-೦-೧೯ |

### ಹುಬ್ಬಳ್ಳಿ ಪೇಟೆ

ಮುಂಬೈ ಪೇಟೆಯಲ್ಲಿ ಬಹಳೇ ಇಳಿಮುಖವಾಗಿದ್ದ ಮೂಲಕ ಇಲ್ಲಿ ಈ ಅಠವಡೆಯಲ್ಲಿ ಏನೂ ವ್ಯವಹಾರವಾಗಿಲ್ಲ. ಆಗಬಹುದಾದ ಅಜಮಾಸ ಧಾರಣೆ

| | | |
|---|---|---|
| ಜಯವಂತ ಹತ್ತಿ | ನಂ. ೧ | ೨೮೫-೨೮೦ |
| ,, | ನಂ. ೨ | ೨೭೫-೨೭೦ |
| ,, | ನಂ. ೩ | ೨೬೦-೨೬೫ |
| ಜಿನ | | ೧೯೫-೨೦೦ |
| ಸಾ ಜಿನ | | ೧೮೦-೧೮೫ |
| ಬಲರೋಲರ | | ೧೮೦-೧೯೦ |

## ಘಟನಾ ಸಮಿತಿಗೆ ಮೈಸೂರು ಪ್ರತಿನಿಧಿಗಳು

### ಅಧಿಕಾರೇತರರಿಗೇ ಹೆಚ್ಚುಸ್ಥಾನ ಹೊಸ ದಿವಾಣರ ಆಶ್ವಾಸನ

ಮೈಸೂರು ಹೊಸ ದಿವಾಣರಾದ ರಾಮಸ್ವಾಮಿ ಮುದಲಿಯಾರರು ಬೆಂಗಳೂರಲ್ಲಿ ಪತ್ರಿಕೋದ್ಯಮಿಗಳ ಪರಿಷತ್ತು ಕರೆದು [ತಾ. ೨೦] ತಮ್ಮ ಆಡಳಿತ ಧೋರಣದ ಕೆಲವಂಶಗಳನ್ನು ವಿವರಿಸಿದರು.

ಪತ್ರಿಕೆಗಳ ಸಾಮರ್ಥ್ಯ ಮತ್ತು ಮಹತ್ವದ ಸ್ಥಾನವನ್ನು ಒಪ್ಪಿಕೊಂಡು ದಿವಾಣರು ರಾಜಮನೆತನದ ವಿಷಯವೊಂದನ್ನು ಬಿಟ್ಟು ಉಳಿದ ಎಲ್ಲ ಆಡಳಿತ ವಿಚಾರಗಳಲ್ಲಿ ಸ್ವತಂತ್ರವೂ ನ್ಯಾಯ್ಯವೂ ಆದ ಟೀಕೆಗಳನ್ನು ತಾವು ಸ್ವಾಗತಿಸುವದಾಗಿ ಸಾರಿದರು.

ಶ್ರೀ ಬಿ. ಎನ್. ಗುಪ್ತರೇ ಮೊದಲಾದ ಪತ್ರಿಕೋದ್ಯಮಿಗಳು ಮೈಸೂರಲ್ಲಿ ಪತ್ರಿಕಾ ಶಾಸನವನ್ನು ಕಠೋರ ರೀತಿಯಲ್ಲಿ ಪ್ರಯೋಗಿಸುವದು ನಿಲ್ಲಬೇಕೆಂದು ಸೂಚಿಸಿದರು. ಪತ್ರಿಕೆಗಳು ತಪ್ಪು ಮಾಡಿದರೆ ಸಂಪಾದಕರನ್ನು ನ್ಯಾಯಾಲಯಕ್ಕೆಳೆಯಬೇಕು. ಹೊರತು ಅವುಗಳನ್ನು ನಿಲ್ಲಿಸಬಾರದೆಂದು ಪ್ರಾರ್ಥಿಸಿದ್ದಲ್ಲದೆ ವಿಶ್ವಕರ್ನಾಟಕದ ಮೇಲಿನ ಪ್ರತಿಬಂಧನನ್ನು ಕಿತ್ತು ಹಾಕಬೇಕೆಂದೂ ಒತ್ತಾಯ ಪಡಿಸಿದರು.

ಘಟನಾ ಸಮಿತಿಗೆ ಮೈಸೂರಿನ ಪ್ರತಿನಿಧಿಗಳನ್ನು ಕಳಿಸುವ ವಿಚಾರದಲ್ಲಿ ಶ್ರೀ ಗುಪ್ತರ ಪ್ರಶ್ನೆಗೆ ಉತ್ತರ ಕೊಡುತ್ತ ದಿವಾಣರು ಮಹಾರಾಜರ ಅಪೇಕ್ಷೆಯಂತೆ ತಾವೇ ಮೈಸೂರಿನಿಂದ ಘಟನಾ ಸಮಿತಿಗೆ ಹೋಗಲಿರುವ ೭ ಪ್ರತಿನಿಧಿಗಳ ಮುಂದಾಳತನ ವಹಿಸುವದಾಗಿಯೂ ಪ್ರತಿನಿಧಿಗಳಲ್ಲಿ ಅಧಿಕಾಂಶ ಅಧಿಕಾರೇತರರನ್ನೇ ಕಳಿಸುವದು ತಮ್ಮ ಅಪೇಕ್ಷೆಯೆಂದೂ ಮುದಲಿಯಾರರು ಹೇಳಿದರು. ಆದರೆ ಪ್ರತಿನಿಧಿಗಳೆಲ್ಲರಲ್ಲಿ ಐಕ್ಯಮತ್ಯವಿರಬೇಕಾದುದು ಅವಶ್ಯವಾದುದರಿಂದ ಈ ದೃಷ್ಟಿಯಿಂದಲೇ ಪ್ರತಿನಿಧಿಗಳನ್ನು ಆರಿಸಲಾಗುವದೆಂದೂ ಅವರು ತಿಳಿಸಿದರು.

ಮೈಸೂರಲ್ಲಿ ಘಟನಾತ್ಮಕ ಸುಧಾರಣೆ ಸದ್ಯದಲ್ಲಿಯೇ ಆಗಲಿರುವದೆ? ಎಂದು ಕೇಳಿದ್ದಕ್ಕೆ ತಾವಿನ್ನೂ ಪರಿಸ್ಥಿತಿಯನ್ನು ಅಭ್ಯಸಿಸುತಿರುವದಾಗಿ ಸರ್ ಮುದಲಿಯಾರರು ಉತ್ತರವಿತ್ತರು.

ಮೈಸೂರ ಸರಕಾರದವರು ಗ್ರಾಮಾಂತರಗಳಲ್ಲಿ ೨ ಲಕ್ಷ ರೂಪಾಯಿಗಳ ವೆಚ್ಚದ ೪೦೦ ಪ್ರಾಥಮಿಕ ಶಾಲೆಗಳನ್ನು ಹೊಸದಾಗಿ ತೆರೆಯಲು ನಿರ್ಧರಿಸಿದುವರು. ಈಗಾಗಲೆ ಸಂಸ್ಥಾನದ ಬೇರೆ ಬೇರೆ ಭಾಗಗಳಲ್ಲಿ ೧೮೦೦ ಪ್ರಾಥಮಿಕ ಶಾಲೆಗಳನ್ನು ತೆರೆದಿರುವರು.

## ದಕ್ಷಿಣ ಕನ್ನಡ

ತಾ. ೫ ಮತ್ತು ೭ ರಲ್ಲಿ ವಿಪರೀತ ಮಳೆ ಬಂದುದರಿಂದ ನದಿ ತುಂಬಿ ಬಂದು ಬೆಳೆ ನಾಶವಾಗಿದೆಯೆಂದು ತಿಳಿಯುತ್ತದೆ. ವಿಶೇಷತಃ ನೇತ್ರಾವತಿ ನದಿಗೆ ನೆರೆಬಂದು ವಾಹನ ಸಂಚಾರ ಕೂಡ ನಿಂತು ಹೋಗಿತ್ತು.

ಈಚೆಗೆ ದಕ್ಷಿಣ ಕನ್ನಡ ಜಿಲ್ಹಾ ಕಾಂಗ್ರೆಸ [illegible] ಸಮಿತಿಗೆ ನಡೆದ ಚುನಾವಣೆಗಳಲ್ಲಿ ೧೪ ಸಕಲ [illegible]ಗಳಿಂದ ೩೮ ಪ್ರತಿನಿಧಿಗಳು ಅವಿರೋಧವಾಗಿ ಆರಿಸಿ ಬಂದಿರುವರೆಂದು ಜಿಲ್ಹಾ ಕಾಂಗ್ರೆಸ ಸಮಿತಿಯ ಕಾರ್ಯದರ್ಶಿಗಳು ಪ್ರಕಟಿಸಿದ್ದಾರೆ.

೧೯೪೨ ರ ಚಳವಳಿಯಲ್ಲಿ ಭಾಗವಹಿಸಿ ಪಟೇಲ ಕೆಲಸಕ್ಕೆ ಎರವಾಗಿದ್ದ ಕಾಸರಗೋಡು ತಾಲೂಕಿನ ಪಟೇಲರಲ್ಲೊಬ್ಬರಾದ ಶ್ರೀ ಪಿ. ವಿ. ಕದಂಬಳಿತ್ತಾಯರನ್ನು ಪುನಃ ಪಟೇಲ ಕೆಲಸಕ್ಕೆ ನೇಮಿಸಿಕೊಳ್ಳಲಾಗಿದೆ.

## ಎಂಡೋಮೆಂಟ ಕಾಯಿದೆಯ ಖಂಡನೆ

### ಉಡುಪಿಯಲ್ಲಿ ಹಿಂದುಗಳ ಸಭೆ

ಹಿಂದೂ ಧರ್ಮಾಭಿಮಾನಿಗಳ ಮಹಾಸಭೆಯೊಂದು ತಾ. ೧೧ ಕ್ಕೆ ಉಡುಪಿಯ ಬೋರ್ಡ ಹಾಯಸ್ಕೂಲಿನ ಸಭಾಭವನದಲ್ಲಿ ಸೇರಿ ಮದ್ರಾಸ ಸರಕಾರದವರು ಹಿಂದೂ ಧರ್ಮ ಸಂಸ್ಥೆಗಳ ಮೇಲೆ ನಿಯಂತ್ರಣ ಹಾಕಲು ತಂದಿರುವ ಕಾಯದೆಯನ್ನು ವಿರೋಧಿಸಿತು. ಕೊಯಮತ್ತೂರಿನ ನಿವೃತ್ತ ಜಡ್ಜರಾದ ಶ್ರೀ ಸಿ. ಆರ್. ಕೃಷ್ಣರಾಯರು ಅಧ್ಯಕ್ಷತೆ ವಹಿಸಿದ್ದರು. ಡಾ. ಟಿ. ಮಾಧವ ಪೈಗಳು ಅಧಿವೇಶನದ ಉದ್ಘಾಟನೆಯನ್ನು ನೆರವೇರಿಸಿದರು.

ಸ್ವಾಗತಾಧ್ಯಕ್ಷರಾದ ವಕೀಲ ಆರೂರ ಲಕ್ಷ್ಮೀನಾರಾಯಣರಾಯರು, ಮಠಗಳಿಗೂ ದೇವಸ್ಥಾನಗಳಿಗೂ ಕಾಯದೆ ದೃಷ್ಟಿಯಲ್ಲಿರುವ ಭೇದವನ್ನು ವಿವರಿಸಿ, ದೇವಸ್ಥಾನಗಳಂತೆ ಮಠಗಳು ಸಾರ್ವಜನಿಕ ಸಂಸ್ಥೆಗಳಾಗಿರದೆ ಮಠಗಳ ಸ್ವಾಮಿಗಳೇ ಅವುಗಳ ಸರ್ವಸೊತ್ತುಗಳಿಗೆ ಬಾಧ್ಯರಾಗಿರುವದರಿಂದ ಗುರುವರ್ಯರನ್ನು ಎಂಡೋಮೆಂಟ ಬೋರ್ಡಿನ ಅಂಕಿತಕ್ಕೆ ಗುರಿಮಾಡಿ ಕೈಕಟ್ಟಿದಂತೆ ಮಾಡುವದು ಉಚಿತವಲ್ಲವೆಂದೂ ಎಂಡೋಮೆಂಟ ಕಾಯಿದೆಯಿಂದ ಮಠಗಳಿಗೆ ಸಂಬಂಧಿಸಿದ ಅಂಶವನ್ನು ಕಿತ್ತೊಗೆಯಬೇಕೆಂದೂ ಸರಕಾರವನ್ನು ಒತ್ತಾಯ ಪಡಿಸಿದರು.

ಮಾನ್ಯ ಅಧ್ಯಕ್ಷರೂ ಹೆಚ್ಚು ಕಡಿಮೆ [illegible] ಧೋರಣೆಯಲ್ಲಿ ಭಾಷಣ ಮಾಡಿ ಗುರುಮಠಗಳ ಸ್ಥಾನಮಾನವನ್ನು ಕಾಪಾಡಲು ಹಿಂದುಗಳೆಲ್ಲರೂ ಬದ್ಧಕಂಕಣರಾಗುವ ಅವಶ್ಯಕತೆಯನ್ನು ಒತ್ತಿ ಹೇಳಿದರು.

### ನಿರ್ಣಯಗಳು

ಸಲಹೆಗಾರರ ಆಡಳಿತದಲ್ಲಿ ತಿದ್ದುಪಡಿ ಹೊಂದಿದ ಎಂಡೋಮೆಂಟ್ ಕಾಯಿದೆಯ ಖಂಡನೆ, ಕ್ರೈಸ್ತರ ಇಗರ್ಜಿ ಮುಸ್ಲಿಮರ ಮಸೀದೆಗಳನ್ನು ಬಿಟ್ಟು ಹಿಂದೂ ಧಾರ್ಮಿಕ ಸಂಸ್ಥೆಗಳನ್ನು ಮಾತ್ರ ನಿಯಂತ್ರಿಸುವದರ ನಿಷೇಧಗಳನ್ನೊಳಗೊಂಡ ಗೊತ್ತುವಳಿಯಾದುದಲ್ಲದೆ ಧರ್ಮಗುರುಗಳು ಜಾಗ್ರತರಾಗಬೇಕೆಂದೂ ಧರ್ಮ ಸಂಸ್ಥೆಗಳ ಹಣದ ಸದ್ವಿನಿಯೋಗ ಮಾಡುವ ಹಕ್ಕು ಆ ಸಂಸ್ಥೆಗಳಿಗೇ ಇರಬೇಕೆಂದೂ ಹೇಳುವ ಗೊತ್ತುವಳಿಯೂ ಎಂಡೋಮೆಂಟ ಕಾಯಿದೆಯ ಗುಣಾವಗುಣಗಳನ್ನು ಪರಿಶೀಲಿಸಿ ವರದಿಮಾಡಲು ಒಂದು ಸಮಿತಿಯನ್ನು ನೇಮಿಸಬೇಕೆಂದು ಕೇಳುವ ಇನ್ನೊಂದು ಗೊತ್ತುವಳಿಯೂ ಪಾಸಾದವು.





## ಕಾವ್ಯ ತರಂಗಿಣಿ

### ಹೆಣ್ಣು

ಅಹಾ ಹೆಣ್ಣೆ, ಓಹೊ ಹೆಣ್ಣೆ
ಏನು ನಗೆಯೆ ಏನು ಕಣ್ಣೆ,
ದೇವ-ಶಿಲ್ಪಿ ಕಡೆದ ಗೊಂಬೆ
ನೆಂಬೆ, ಹಾಗೆ ಹೇಗೆ ಎಂಬೆ
ನಾವು ಕಂಡ ಮೂರ್ತಿಯೆ
ಎದೆಯು ನಿತ್ಯ ಸ್ಫೂರ್ತಿಯೆ.
ಹುಸದ ಮುಗಿಲೆ ಮಂದಿರ
ಅಲ್ಲಿ ನೀನು ಚಂದಿರ
ಇರುಳಿರುಳೂ ಹುಣ್ಣಿವೆ
ಇಲ್ಲವೇನೊ ಕಣ್ಣಿವೆ
ನಮಗೆ, ನಾವ್ ನಿಲಿಂಪರು
ಅಹಹಾ, ಜಗಜಂಪರು
ಎದೆಯ ಒಲವ ಸುರಿದೆವು
ಎಷ್ಟೊ ಚಿತ್ರ ಬರೆದೆವು
ಕವನ ಕಟ್ಟಿ ಹಾಡಿಸಿ
ನಿರುತ್ಸಾಹ ಓಡಿಸಿ
ಹೊಳ್ಳ ಕಡಲ ಕಣಗಳ
ತಂದು ಮುತ್ತು ಮಣಿಗಳ
ಹೂವ ಮುಡಿಸಿ ಮುಡಿಯಲಿ
ಹೂವ ಕಂಡು ನುಡಿಯಲಿ
ನಲ್ಲೆ ಎಂದು ಕುಣಿದೆವು
ತಾಯಿ ಎಂದು ಮಣಿದೆವು
ಕ್ಷಣಕ್ಷಣಕೂ ಹೊಸದೆ ರೂಪು
ಇದುವೆ ನಿನ್ನ ನಿಜಸ್ವರೂಪು
ಕೋರಿಕೆಗೋ ಹೆಣ್ಣು,
ಜೀವ ಪಡೆದ ಕಣ್ಣು !

—ಅಂಬಿಕಾತನಯದತ್ತ

### ದೇವಿ

೧.

ದೇವಿ, ನೀನು ದೇವನೊಬ್ಬನ ಶಿಲ್ಪವೆನ್ನುವೆನೆ:
ಮನುಜನಿರ್ಮಿತ ಕಲೆಯು ಸೃಷ್ಟಿಯ
ಮುಡಿಪೆ ಎನ್ನುವೆನೆ ?
ಕಸಿಕರೆದೆಯು ರಾಗವೇರಿ ಬೆಳಗಿನಂದದೆ ರಂಜಿಸಿ
ಸೊಬಗರಾಸಿಯು ಹಂಸುತಿಹುದು ನಿನಗೆ
ಎಂದಿಗು ರೂಪಸಿ !

೨.

ಕವಿಯು ಕಣ್ಣಿನ ಕಾವ್ಯರಾಜ್ಯದ ರಾಣಿಯಲ್ಲವೆ ನೀ
ಕಲ್ಪನೆಯ ಬಂಗಾರದೆಳೆಗಳ ಭವ್ಯವಸನ
ವಿಭೂಷಿಣೀ
[illegible]ರ ಚಿತ್ರರಂಗದೆ ಹೊಳೆಯುತಿಹ
ಹೊಸ ಸ್ಫೂರ್ತಿಯೇ
[illegible]ದಿನವು ಉದುರತೆಯ ಪಡೆಯುವ
ನವೋನವ ಮೂರ್ತಿಯೆ !

೩.

ಸಾಗರವು ತಾನುಬ್ಬುವುದು ಆಣಿಮುತ್ತುಗಳನಿತ್ತು
ಕಣಿಯು ಮಣಿಯುತಲಿಹುದು
ಹೊನ್ನು-ರನ್ನಗಳನಿತ್ತು
ವಸಂತ ಬನಗಳು ಮುಂಗುಳು
ನಗೆಯೊಳಗೀಯುವುವು ಬಾಸಿಗಗಳ
ಸ್ನೇಹ ಸಿಂಗರ, ಮುಡಿಯ ಬಂಧುರ;
ಮಾಡಿ ಚಂದಿಹ ತಿಂಗಳ !

೪.

ಸರಸ ಹೃದಯದ ಹಿರಿಯ ಜಯಕೆಯ
ಬಳ್ಳಿಮಿಂಚಿನ ಸೆಳೆಗಳು
[illegible]ವೆ ಅರತಿಯ ನಿನ್ನಯ ತುಂಬುಜವ್ವನ
ಗುಡಿಯೊಳು
ದೇವತೆಯೆ ನೀನೆಂದು ಪೂಜಿಸಿ
ಭಕ್ತಿಭಾವದೆ ಬಾಗಿದೆ:
ಹೊಸಿದರೆ ನೀನರ್ಧನಾರಿ, ಉಳಿದುದೆಲ್ಲವು
ಕನಸಿದೆ !

—ಸದಾನಂದ ನಾಯಕ

(ಮೇಲಿನ ಎರಡೂ ಕವಿತೆಗಳು ರವೀಂದ್ರರ "Woman" ಕವನದ ಭಾವಾನುವಾದಗಳು. ಹೊನ್ನೆ ೩-೮-೪೬ ಕ್ಕೆ ಗೊಲ್ಹಾಪುರ ಡಿ. ಎ. ಪಿ. ಕಾಲೇಜಿನ ಕನ್ನಡ ಸಂಘದವರು ಏರ್ಪಡಿಸಿದ ರವೀಂದ್ರ ದಿನಾಚರಣೆಯ ಕಾಲಕ್ಕೆ ಇವುಗಳನ್ನು ಓದಲಾಗಿತ್ತು.)



ಒಂದು ಬಹಿರಂಗ ಪತ್ರ

## ಮದ್ರಾಸ ನಗರದ ಮಹಾಜನಗಳಲ್ಲಿ ಬಿನ್ನಹ

ಸನ್ಮಾನ್ಯರೆ, ಕಂನಾಡಿನ ಬೇರೆ ಬೇರೆ ಭಾಗಗಳಿಂದ ಹೋಗಿ, ತಮ್ಮ ಶ್ರೇಷ್ಠ ಗುಣ, ಕೌಶಲ್ಯ, ಕರ್ತೃತ್ವ ಶಕ್ತಿಗಳ ಬಲದಿಂದ ಮದರಾಸದಂತಹ ಭಾರತದ ಮಹಾನಗರದಲ್ಲಿ ಗಣ್ಯರೆನಿಸಿ, ಮಾನ್ಯರೆನಿಸಿ, ನೀವು ಹೆಸರಾಂತು ಬಾಳುತ್ತಿರುವುದು ನಮ್ಮ ನಾಡಿಗೆಲ್ಲ ಹೆಮ್ಮೆಯ ಹಿಗ್ಗಿನ ಮಾತಾಗಿದೆ.

ಮದರಾಸಿನಲ್ಲಿ ಇರಬೇಕಾಗಿದ್ದರೂ ತಾವು ತಮ್ಮ ನಾಡು ಮತ್ತು ನುಡಿಗಳನ್ನು ಮರೆತಿಲ್ಲವೆಂಬುದನ್ನು, ೧೯೪೫ ರಲ್ಲಿ ಕ. ಸಾ. ಸಮ್ಮೇಳನವನ್ನು ಒಳ್ಳೆ ಸಡಗರದಿಂದ ಜರುಗಿಸಿ ತಮ್ಮ ಚಿರಸ್ಮರಣೀಯ ಕೃತಿಯಿಂದ ಸಿದ್ಧಪಡಿಸಿದ್ದೀರಿ. ಕರ್ನಾಟಕ ಮಿತ್ರ ಮಂಡಲ, ಸಾಹಿತ್ಯಸೇವಾ ಸಮಾಜ, ನಗರ ಸಾಹಿತ್ಯ ಶಾಖೆ ಮೊದಲಾದ ಸಂಸ್ಥೆಗಳ ಮುಖಾಂತರ ಅನುದಿನವೂ ತಮ್ಮ ನಾಡು-ನುಡಿಗಳ ಅರಿವು ಅಲ್ಲಿಯ ಕಂನ್ನಾಡಿಗರಲ್ಲಿ ದೃಢವಾಗುವುದಕ್ಕಾಗಿ ಪರಿಶ್ರಮಪಡುತ್ತಿರುವಿರಿ. ಇದೆಲ್ಲವೂ ಅಭಿನಂದನೀಯವಾಗಿದ್ದು ಕರ್ನಾಟವು ಇದಕ್ಕಾಗಿ ನಿಮಗೆ ಋಣಿಯಾಗಿದೆ.

ಆದರೆ ಇವೊಂದು ಮುಖ್ಯ ಮಾತನ್ನೇ ಕಡೆಗಣಿಸಿರುವದರಿಂದ ನಿಮ್ಮ ಇವೆಲ್ಲ ಪರಿಶ್ರಮಗಳು ಬೂದಿಯಲ್ಲಿ ಮಾಡಿದ ಹೋಮದಂತೆ ನಿರರ್ಥಕವಾಗುವ ಹೆದರಿಕೆಯಿದೆ. ಯಾವುದೊಂದು ದೇಶಭಾಷೆಯನ್ನು ಅಭ್ಯಾಸ ಮಾಡದೆ ಮದ್ರಾಸ ವಿಶ್ವವಿದ್ಯಾನಿಲಯದಲ್ಲಿ ಪ್ರವೇಶವೇ ದೊರೆಯುವಂತಿಲ್ಲವೆಂಬ ನಿರ್ಬಂಧದ ಮೂಲಕ ಈಗ ಮದರಾಸಿನಲ್ಲಿ ಇರುವ ಕಂನಾಡಿಗರಿಗೆ ತಮ್ಮ ಮಕ್ಕಳಿಗೆ (ತಮ್ಮ ಭಾಷೆಯ ಶಾಲೆಗಳಿಲ್ಲದ್ದರಿಂದ) ತೆಲುಗು ಅಥವಾ ತಮಿಳನ್ನು ಕಲಿಸುವ ಹೊತ್ತು ಬಂದಿದೆ.

ಅತ್ಯಂತ ಗುಣವಂತರೂ ಧೀಮಂತರೂ ಧನವಂತರೂ ಆದವರು- ನಮ್ಮ ನಾಡಿನ ಹೆಮ್ಮೆಯ ವಿಷಯವಾಗಿರುವವರು- ಇಂತಹರ ಮಕ್ಕಳೇ ತೆಲಗು ತಮಿಳನ್ನು ಕಲಿತರೆ ನಮ್ಮ ನಾಡಿನ ಹಾನಿ ಎಷ್ಟು ಅಪಾರವೆಂಬುದನ್ನು ನೀವೇ ಯೋಚಿಸಿರಿ! ಸತ್ಯಭಾಮೆಯ ಹಿತ್ತಲಲ್ಲಿ ಪಾರಿಜಾತದ ಗಿಡ, ಹೂಗಳ ಲಾಭವು ದೊರೆಯುವುದು ರುಕ್ಮಿಣಿಗೆ! ಈವರೆಗೆ ನಮ್ಮ ನಾಡಿನ ಪಾಡು ಇದೇ ಬಗೆಯದಾಗಿದೆ! ಹೆಸರು ಕರ್ನಾಟಕೀಯರು; ಅವರ ಬೌದ್ಧಿಕ ಆರ್ಥಿಕ ಮೊದಲಾದ ಎಲ್ಲ ಬಗೆಯ ಲಾಭವು ದೊರೆಯುತ್ತಿರುವುದು ಮಹಾರಾಷ್ಟ್ರಕ್ಕೊ ತೆಲಗು ತಮಿಳ ನಾಡಿಗೂ!

ಇನ್ನು ಬೇಗನೆ ಭಾಷಾನುಗುಣ್ಯಪ್ರಾಂತ ರಚನೆಯಾಗಲಿದೆ. ಆಗ ನಿಮ್ಮ ಮಕ್ಕಳಿಗೆ ಕಂನಾಡಿನಲ್ಲಿ ದೊರೆಯಬಹುದಾದ ಒಳ್ಳೆಯ ಸ್ಥಾನಮಾನಗಳು ಮಹಾರಾಷ್ಟ್ರದಲ್ಲಾಗಲಿ, ತೆಲುಗು-ತಮಿಳ ನಾಡಿನಲ್ಲಾಗಲಿ ದೊರೆಯಲಾರವು. ಆದುದರಿಂದ ಆ ದೂರದೃಷ್ಟಿಯಿಂದಲಾದರೂ ನಿಮ್ಮ ಮಕ್ಕಳು ಕಂನುಡಿಗೆ ಎರವಾಗದಂತೆ ನೋಡಿಕೊಳ್ಳುವುದು ನಿಮ್ಮ ಕರ್ತವ್ಯವಾಗಿದೆ. ನಾಡಿನ ನುಡಿಯೇ ಚೆನ್ನಾಗಿ ಬಾರದೆ ಯಾವನೂ ಆ ನಾಡಿನ ಸೇವಾರನಾಗಲಾರನು. ಆ ನಾಡಿನಲ್ಲಿ ಗಣ್ಯನೆನಿಸಿಕೊಳ್ಳಲೂ ಆರನು. ಈಗ ನಿಮ್ಮ ಮಕ್ಕಳಿಗೆ ಕಂನುಡಿಯೇ ಬಾರದಿದ್ದಲ್ಲಿ, ಮುಂದಿನ ಅವರ ಜೀವಮಾನದ ಹಿರಿಯ ಮಹತ್ವಾಕಾಂಕ್ಷೆಗಳಿಗೆಲ್ಲ ನೀರು ಹಾಕಿದ ಪಾಪವು ನಿಮ್ಮನ್ನು ತಟ್ಟದೆ ಇರಲಾರದು.

ಮದರಾಸಿನಲ್ಲಿ ಮಹನೀಯರಲ್ಲಿ ಕೆಲವರಲ್ಲಿ ಒಬ್ಬೊಬ್ಬರೆ ಒಂದೊಂದು ಹೈಸ್ಕೂಲನ್ನು ನಡೆಸಿಕೊಡುವದಕ್ಕೆ ಸಮರ್ಥರಾಗಿದ್ದಾರೆ. ಮುತ್ತಯ್ಯಚೆಟ್ಟಿಯರಂತೆ ನಮ್ಮ —ಧಾಯರು ಒಂದು ಹೈಸ್ಕೂಲನ್ನು ಸ್ಥಾಪಿಸಿ ತಮ್ಮ ಹೆಸರನ್ನು ಸ್ಥಿರಗೊಳಿಸಲಾರರೆ? ಮುಂದಿದ್ದಲ್ಲಿ ಮಾರ್ಗವಿದೆ. ಬಸ್ಸವೊಂದು ಇಟ್ಟು ಬೇರೆ ಬೇರೆ ಶಾಲೆಗಳಿಂದಲೂ ಕಂನಾಡ ವಿದ್ಯಾರ್ಥಿಗಳನ್ನು ತಂದು ಒಂದು ಶಾಲೆಯನ್ನು ಯಶಸ್ವಿಯಾಗಿ ನಡೆಸಬಹುದಾಗಿದೆ. ನಮ್ಮ ನುಡಿಯನ್ನು ಕಲಿಸಲು ಈಗ ಯಾವ ಏರ್ಪಾಟವೇ ಇಲ್ಲದ್ದರಿಂದ ಮಕ್ಕಳ ಮನವೊಳಗಿಂದ ಅದನ್ನು ಒರಸಿ-ಕೊಂಡಾ-ಪರಭಾಷೆಯನ್ನು ಕಲಿಸುವ ವಿಪರೀತ ಕ್ರಮವು ನಡೆದುದು ಶೋಚನೀಯವಾಗಿದೆ. ಈ ಬಗೆಯಾಗಿ ನಡೆದ ಕಂನುಡಿಯನ್ನು ಅಳಿಸಿ ಬಿಡುವ ಈ ಘೋರ ಕೆಲಸವು ಬೇಗನೆ ನಿಂತಷ್ಟೂ ನಾಡಿನ ಹಿತವಿದೆಯೆಂಬುದನ್ನು ತಿಳಿದವರಾದ ತಮಗೆ ವಿವರಿಸಿ ಹೇಳಬೇಕೆ?

## ಮಲ ಮಗಳು

(೨ನೇ ಪುಟದಿಂದ ಮುಂದರಿದುದು)

ಯಾರಿಗೋ ಪರಿಚಿತರಿಗೆ ಆಮಂತ್ರಣ ಕೊಡುವ ಹಾಗೆ ಒಂದು ಅಚ್ಚಾದ ಚೀಟಿ ಕಳಿಸಿದ್ದಾರೆ"

"ನಮ್ಮ ಅಣ್ಣನ ಮದುವೆಗೆ ನಾನು ಹೋಗಬಾರದೇ ?"

"ಯೋಗ್ಯ ಔತನವಿದ್ದರೆ ಅಣ್ಣನ ಮದುವೆಗೇಕೆ ಊರ ತಳವಾರನ ಮದುವೆಗೆ ಕೂಡ ಹೋಗಬಹುದು. ಹಡೆದ ತಂದೆ ಮಗಳನ್ನು ಮಗನ ಮದುವೆಗೆ ಕರೆಯುವ ಲಕ್ಷಣ ನೋಡಿರಿ. ಅಚ್ಚಾದ ಕೆಂಪುಕಾಗದ ! ಕೆಂಪು ಯಾವಾಗಲೂ ಭಯಸೂಚಕ. ಇಂಥ ಚೀಟಿಗಳು ಸುದ್ದಿ ಮುಟ್ಟಸಲಿಕ್ಕೆ ಮಾತ್ರ ಔತನಕ್ಕಲ್ಲ."

o o o

ದಿನಗಳು ಉರುಳಿದವು. ಈಗ ಗೀತಾ ಬಸುರಿ. ಬಹುದಿನಕ್ಕೆ ಬಸುರಿಯಾದ ಅವಳಿಗೆ ಊರಲ್ಲಿ ಅನೇಕ ಕಡೆಗೆ ಕುಪ್ಪಸ ಮಾಡಿದರು. ಅವಳಿಗೆ ಅನೇಕ ಪತ್ತಲಗಳು ಖಣಗಳು ಬಂದವು. ಅವೆಲ್ಲವನ್ನೂ ನೋಡಿ ಗೋಪಾಲ ಚೇಷ್ಟೆ ಮಾಡಿದನು. "ಎಲ್ಲ ವಸ್ತ್ರಗಳೂ ನಿನಗೇ ! ನಿನ್ನ ಜೊತೆಗೂಡಿ ಉಂಡದಕ್ಕೆ ನನಗೆ ಒಂದು ಧೋತರ ಜೋಡಿ ಬಿಡು, ಮೂಗುವೊರಿಸಲು ಒಂದು ಕೈಯರಿವೆಯನ್ನಾದರೂ ಕೊಡಬಾರದೇ ?"

"ನಾಳೆ ಹಡೆವ ಏಸಿರಿ ಮರೆಯಲಿಕ್ಕೆ ಇಂದಿನ ಉಡುಗೋರೆ," ಆನಳೆಂದಳು. ಗೋಪಾಲನ ನಾಲಿಗೆಗೆ ಮೊಳೆ ಹೊಡೆದಂತಾಯಿತು. ಅವಳ ಹೇಳಿಕೆ ಸರಿಯಿದ್ದರೂ ಇರಬಹುದೆನ್ನಿಸಿತು. ಬೆಳಗಾವಿಯಲ್ಲಿ ತನಗಾದ ಕುಪ್ಪಸಗಳ ಸಂಖ್ಯೆಯನ್ನು ವಿವರಿಸಿ ತನ್ನ ಗಂಡನ ಖಳಗವನ್ನು ಬಚ್ಚಿಸಿ ತನ್ನ ತಂಗಿಗೆ ಗೀತಾ ಓಲೆ ಬರೆದಳು. ಮುಂದೆ ಮೂರುನಾಲ್ಕು ದಿವಗಳಲ್ಲಿ ಮಾವನ ಕಡೆಯಿಂದ ಗೋಪಾಲನಿಗೆ ಒಂದು ಓಲೆ ಬಂದಿತು. ಮರುದಿನ ಒಂದುನೂರು ರೂಪಾಯಿ ಮನಿಆರ್ಡರ ಬಂದಿತು. ಗೋಪಾಲನು ಹಣವನ್ನು ಸ್ವೀಕರಿಸಲಿಲ್ಲ.

"ಮನಿಆರ್ಡರ ನಿಮ್ಮದಲ್ಲ?" ಟಪಾಲದ ಪೇದೆ ಅಂದನು.

"ನನ್ನದೇ"

"ಹಾಗಾದರೆ ಸಹಿ ಮಾಡಿ ಹಣ ತಕ್ಕೊಳ್ಳಿರಿ"

"ನನಗೆ ಹಣ ಬೇಡ. ನಾನು ತಕ್ಕೊಳ್ಳುವದಿಲ್ಲ" ಬಂದ ರೂಪಾಯಿಗಳನ್ನು ತಿರುಗಿ ಕಳಿಸಿದವರಲ್ಲಿ ಈ ಊರಿನಲ್ಲಿ ನೀವೇ ಮೊದಲಿಗರು."

"ಈ ರೀತಿ ರೂಪಾಯಿ ಬಂದವ ಇಲ್ಲಿಯ ವರೆಗೆ ನಾನೊಬ್ಬನೇ ಇರಬೇಕು."

"ಇರಬಹುದು! ಇರಬಹುದು!! ಅರ್ಥ ತಿಳಿಯಾರದೆ ಟಪಾಲ ಪೇದೆ ನುಡಿದು ಅಲ್ಲಿಂದ ಕಾಲ್ದೆಗೆದನು.

"ನನ್ನ ಬಾಣಂತಿತನಕ್ಕಾದರೂ ಸಹಾಯವಾಗುತ್ತಿತ್ತು. ತಿರುಗಿ ಕಳಿಸಿದರೇಕೆ?" ಗೀತಾ ದೀನವಾಣಿಯಿಂದ ನುಡಿದಳು.

"ನೀನು ಮಾತಾಡಬೇಡ" ಗೋಪಾಲನು ಕಾರಿದು ಬಿದ್ದನು. "ಈ ವ್ಯವಹಾರ ಏನು ವ್ಯಾಪಾರೀ ವ್ಯವಹಾರ ಅಂತ ನಿಮ್ಮಪ್ಪ ತಿಳಿದಿರುವನೇನು? ಕರೆದುಕೊಂಡು ಹೋಗಿ ಬಾಳಂತಿತನ ಮಾಡಲಿ ಒಂದು ಮಾತು. ನಿನ್ನ ಹತ್ತು ಬಾಳಂತಿತನವನ್ನು ಮಾಡುವ ಶಕ್ತಿ ನನ್ನಲ್ಲಿದೆ. ಒಂದು ಒಪಕು ಪೈ ಕೂಡ ನಿಮ್ಮ ತಂದೆಯ ಕಡೆಯಿಂದ ಬೇಡ."

—"ಇದು ತಂದೆಯ ವಿಚಾರವಿರಲಿಕ್ಕಿಲ್ಲ. ಅಪ್ಪ ಹೀಗೆ ಎಂದೂ ಮಾಡಲಾರರು!" ಗೀತಾ ನುಡಿದಳು.

"ಹಾಗಾದರೆ ಹೀಗೆ ಯಾರು ಮಾಡಿದರು? ನಿಮ್ಮ ತಾಯಿ?"

"ನನಗೆ ಒಂದೂ ತಿಳಿಯುವದಿಲ್ಲ." ಎಂದು ಅಳಲಿನ ಕಡಲಿನಲ್ಲಿ ತನ್ನ ಮೂದಿನ ಮಾತುಗಳನ್ನು ಮುಳುಗಿಸಿದಳು.

o o o

ಗೀತೆಗೆ ದಿನತುಂಬಿದವು. ಒಂದು ದಿನ ಮುಂಜಾನೆಯಲ್ಲಿಯೇ ಬೇನೆ ತಿನ್ನಹತ್ತಿದಳು. ಗೋಪಾಲನು ಒಂದು ಗಾಡಿಯನ್ನು ಮಾಡಿಕೊಂಡು ಅವಳನ್ನು ಅಸ್ಪತ್ರೆಗೆ ಕಳಿಸಿ ತಾನೂ ಅಲ್ಲಿಯೇ ಉಳಿದನು. ನೆರೆಹೊರೆಯ ಒಂದಿಬ್ಬರು ಹೆಂಗಸರು ಅಸ್ಪತ್ರಿಗೆ ಹೋಗಿ ಪಾಳಿಯಂತೆ ಅವಳ ಹತ್ತಿರ ಇರಹತ್ತಿದರು. ಅವರ ಹೊರತು ಮತ್ತೆ ಮೂರು ನಾಲ್ಕು ಓಣಿಯ ಹೆಂಗಸರೂ ಅಲ್ಲಿಗೆ ಬಂದು ಹೋದರು. ಗೋಪಾಲನು ಮಾತ್ರ ಬಹಿಷ್ಕೃತ ಪ್ರಾಣಿಯಂತೆ ಹೊರಗೇ ಉಳಿಯಬೇಕಾಯಿತು. "ನಾನು ಹೆಂಗಸಾಗಿದ್ದರೆ, ಚೆನ್ನಾಗಿತ್ತಲ್ಲ." ಎಂದು ಅವನಿಗೆ ಅನಿಸಿತು. ಅವಳಿಗೆ ಬೇನೆ ಮರುಕಳಿಸಿದಾಗ ಅವಳು ಚೀರುವದನ್ನು ನೋಡಿ ಇವನ ಎದೆಯು ದಡಬಡನೆ ಹಾರುತ್ತಿತ್ತು. ಅವನು ತನ್ನ ಗೋಣನ್ನು ತುಸು ಬಗ್ಗಿಸಿದ್ದರೆ ತನ್ನ ಘುಮ್ಮಸದ ಕ್ರಿಯೆಯು ತನಗೆ ಕೇಳಿಸುತ್ತಿತ್ತು. ಎಲ್ಲ ಶಕ್ತಿಯನ್ನು ಕಿವಿಯಲ್ಲಿ ಕೇಂದ್ರೀಕರಿಸಿ ಒಳಗೆ ನಡೆಯುವದೆಲ್ಲವನ್ನೂ ಅವನು ಕೇಳುತ್ತಿದ್ದನು. ಸಪ್ಪಳಗಳ ತಾರತಮ್ಯದಿಂದ ಚಟುವಟಿಕೆಗಳ ಗುರುತು ಹಚ್ಚಿಕೊಂಡು ಒಳಗೆ ನಡೆದ ಘಟನೆಗಳ ಸುಸಂಬದ್ಧ ಇತಿಹಾಸವನ್ನು ಅವನು ತನ್ನ ಮನಃಪಟಲದ ಮೇಲೆ ಮೂಡಿಸಲು ಸಾಹಸಪಡುತ್ತಿದ್ದನು. ಈ ಹರಕುಮುರುಕು ಚಿತ್ರದಿಂದಲೇ ಅವನು ತೃಪ್ತಿ ಹೊಂದಬೇಕಾಗಿತ್ತು. ಮುಂದೆ ತುಸು ಹೊತ್ತಿನಲ್ಲಿಯೇ ಇಡೀ ಇರುಳಿನ ಜಾಗರಣೆಯನ್ನು ತಡೆಯಲಾರದೆ ಬಳಲಿದ ಅವನ ದೇಹವು ಅರ್ಧ ತಾಸು ಬೆಳಗಿನ ಜಾವದಲ್ಲಿ ನಿದ್ದೆಹೋಯಿತು.

ಮುಂಜಾವಿನ ಐದಾಗಿರಬಹುದು. ಅವನು ಕುಳಿತ ಛಾಗಿಲವು ಮೆಲ್ಲಗೆ ತೆಗೆಯಿತು. ಆದರೆ ಆ ಅಲ್ಪ ಸಪ್ಪಳವು ಕೂಡ ಅವನ ಕಿವಿಯಲ್ಲಿ ನಗಾರಿ ಬಾರಿಸಿದಂತೆ ಗುಡುಗಿತು. ಗೋಪಾಲನು ಬುದಿಂಗನೆ ಎದ್ದು ಹೊರಕ್ಕೆ ಬರುತ್ತಿರುವ ವೈದ್ಯರನ್ನು "ಏನಾಯಿತು?" ಎಂದು ಕೇಳಿದನು.

"ಹೆಣ್ಣು !"

"ಇಬ್ಬರೂ ಸುಖವಾಗಿದ್ದಾರೆಯೇ?"

"ಕೂಸಿಗೇನೂ ಚಿಂತೆಯಿಲ್ಲ." ವೈದ್ಯರು ಮೋರೆ ತಿರುವುತ್ತ ಮುಂದೆ ನಡೆದು ನುಡಿದರು. "ಕೂಸಿಗೆ ಬೆಂಕೀ ಹಚ್ಚಿರಿ....ಆದರೆ ಅವಳಿಗೆ ....ಅವಳು!! ಗೋಪಾಲನು ಬಾಳಂತಿಯ ಕೋಣೆಯೊಳಕ್ಕೆ ಧುಮುಕಿದನು. ಒಂದು ಪಲ್ಲಂಗದ ಮೇಲೆ ಅವಳು ಪವಡಿಸಿದ್ದಳು. ಅರಳೆಯಲ್ಲಿ ಸುತ್ತಿದ ಗಾಜಿನ ಕೋಳಿವೆಯ ಬೂಹು ಕಾಣುವಂತೆ ಅವಳ ಮೋರೆಯು ಮಾತ್ರ ಕಾಣುತ್ತಿತ್ತು. ಮೋರೆಯ ಯಾವ ಭಾಗವೂ ಕಿವುಚಿರಲಿಲ್ಲ. ಸಾವು ಅವಳಿಗೆ ಒಮ್ಮೆಲೇ ಬಂದಿರಬೇಕು. ಆದರೂ ಅವಳ ಇಡೀ ಮೋರೆಯ ಮೇಲೆ ಚಿಂತೆಯ ಒಂದು ಅಸ್ಫುಟ ತೈಲಲೇಪನವನ್ನು ಸವರಿದಂತಿತ್ತು. ಗೋಪಾಲನು ಅವಳ ಹತ್ತಿರ ಕುಳಿತು ಅವಳ ತಂಪಾದ ಕೈಗಳನ್ನು ತನ್ನ ಸುಡುವ ಕೈಗಳಲ್ಲಿ ಬಿಗಿ ಹಿಡಿದು ಬಿಕ್ಕಿ ಬಿಕ್ಕಿ ಮನದಣಿ ಅತ್ತನು. ಅಸ್ಪತ್ರಿ ಕಾಯದೆಗೆ ಇದು ತೀರ ವಿರುದ್ಧವಾಗಿದ್ದರೂ ಅವನ ಅಳಲನ್ನು ಯಾರೂ ತಡೆಯಲಿಲ್ಲ. ಇಂಥ ಘಟನೆಗಳನ್ನು ದಿನವೂ ನೋಡಿ ಕರುಳು ಕಳೆದುಕೊಂಡ ದಾಯಿಗೆ ಕೂಡ ಮರುಕ ಹುಟ್ಟಿತು.

"ವಾಯೀ! ನನ್ನ ಗೀತಾ ನನ್ನ ವಿಷಯವಾಗಿ ಏನೂ ಹಾಡಲಿಲ್ಲವೇ? ನನ್ನನ್ನು ಕರೆಯಲಿಲ್ಲವೇ? ನನ್ನನ್ನು ನೆನಿಸಲಿಲ್ಲವೆ? .... ಸಾಯುವ ಕಾಲಕ್ಕೆ ಒಂದೇ ಒಂದು ನುಡಿ ಮಡಿಯಲಿಲ್ಲವೆ?......."

"ನನಗೂ ಅಷ್ಟು ಕೇಳಿಸಲಿಲ್ಲ. ಆದರೆ ಅವಳು ಹುಟ್ಟಿದ ಕೂಸನ್ನು ಉದ್ದೇಶಿಸಿ ಅಸ್ಪಷ್ಟವಾಗಿ ಹೀಗೆ ಅಂದಳು. "ನಾನೂ ಮಲಮಗಳು, ನೀನೂ ಮಲಮಗಳಾದಿಯಾ?" ಎಂದು"

"ಹೀಗೆಂದಳೇ?" ಸಂಪೂರ್ಣ ಬೆಳಕು ಪಡೆದ ಗೋಪಾಲನೆಂದನು. "ಎಂದಿಗೂ ಇಲ್ಲ .... .... ಎಂದೆಂದಿಗೂ ಇಲ್ಲ." ಗೀತೆಯ ಕೈಯನ್ನು ಮೆಲ್ಲಗೆ ಬಿಟ್ಟು, ಸಾವಕಾಶವಾಗಿ ಎದ್ದು, ಬದಿಯಲ್ಲಿಯೇ ತೊಟ್ಟಿಲಲ್ಲಿ ತೂಗಾಡುತ್ತಿರುವ ಆಗಲೇ ಅರಳಿದ ಹೆಣ್ಣು ಹೂವಿನ ಕೈ ಪಕಳೆಗಳನ್ನು ತಕ್ಕೊಂಡು, "ಎಂದಿಗೂ ಇಲ್ಲ.... ಎಂದೆಂದಿಗೂ ಇಲ್ಲ." ಎಂದು ಉಚ್ಚವಾಗಿ ಸಾರಿದನು.

ಕೂಸು ಹೆದರುವಷ್ಟೆ ನೀಲ ನೋಟದಿ ಮೆಲ್ಲನೆ ಮೋರೆಯುರಳಿಸಿತು.

ತಾ. ರಾಮರಾಯರಂತಹ ಕಂನಾಡ ಭೀಷ್ಮರು ಅಲ್ಲಿದ್ದಾರೆ. ಅವರು ಮುಂದುವರಿದು, 'ಇದು ಹೀಗಾಗಬೇಕು' ಎಂದು ಹೇಳಿದರೆ ಅದಕ್ಕೆ ಎರಡು ಹೇಳುವವರು ಅಲ್ಲಿ ಯಾರೂ ಇಲ್ಲ. ಆದುದರಿಂದ ಇಂತಹರು ಈ ವಿಷಯದಲ್ಲಿ ಮುಂದೆ ಬಂದು ಕಂಪಾಡಿಯನ್ನು ಈ ಕುತ್ತದೊಳಗಿಂದ ಪಾರುಮಾಡಿದ ಅಮರಕೀರ್ತಿಯನ್ನು ಪಡೆಯಬೇಕೆಂದು, ತಮ್ಮೆಲ್ಲರಲ್ಲಿ ಕಳಕಳಿಯಾಗಿ ಬೇಡುವ,

ಕ. ಶಾ. [illegible]




ಜ್ಯೋತಿಷಿ:-ಕೃಷ್ಣಶಾಸ್ತ್ರಿ ಭಿಡೆ, ಭವಿಷ್ಯಕಥನ ಕಾರ್ಯಾಲಯ, ಖಡೇಬಜಾರ ಬೆಳಗಾವಿ

# ಅಗಸ್ಟ ತಾ. ೨೬ ರಿಂದ ಸಪ್ಟೆಂಬರ ೧

## ಮೇಷ

ನಿಮ್ಮ ಮತ್ತು ನಿಮ್ಮ ಹೆಂಡತಿಯ ಪ್ರಕೃತಿಗೆ ಕಿರಕುಳ ಕ್ಲೇಶವುಂಟಾಗಿ ಇಬ್ಬರ ಮನಸ್ಸು ಪ್ರಾಪಂಚಿಕ ವಿಷಯಗಳಲ್ಲಿ ಬಹಳ ಉದಾಸೀನವಾಗುವದು. ಉದ್ಯೋಗದಲ್ಲಿ ಪ್ರಗತಿ ಉತ್ತಮ. ಪ್ರತಿಷ್ಠೆಯೂ ಜೋರಿನಲ್ಲಿ ಆದರೆ ಲಾಭ ಬಹಳ ಕಡಿಮೆಯಾಗಿ ವೆಚ್ಚ ಮಾತ್ರ ಇಮ್ಮಡಿಯಾಗುವದು. ಆಪ್ತರಿಂದ ವಿನಾ ಕಾರಣ ಅವಹೇಲನೆ ಮಾಡಲಾಗುವದು ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉಭಯಪಕ್ಷಗಳಿಗೂ ಅಷ್ಟೇ ಹಾನಿಯಾಗುವದು. ಮಿತ್ರತ್ವದಲ್ಲಿ ವಿರೋಧ. ಸ್ವಪ್ನ ಅಶುಭ ಪ್ರವಾಸ ಮತ್ತು ಭೆಟ್ಟಿಯೂ ಪತ್ರವ್ಯವಹಾರಕ್ಕಿಂತ ಅನುಕೂಲ. ಅಶ್ವಿನಿಯ ೪ನೆ ಮತ್ತು ಭರಣಿಯ ಮೊದಲನೆ ೩ ಚರಣಗಳಿಗೆ ತೊಂದರೆ ಕಡಮೆ. ತಾ. ೨೬, ೨೭, ೩೧ ಅನುಕೂಲ.

## ವೃಷಭ

ಪ್ರಕೃತಿ ಮತ್ತು ಪ್ರಾಪಂಚಿಕ ಸುಖ ಉತ್ತಮ. ಮಕ್ಕಳಿಂದ ಪ್ರಿಯವರ್ತನ. ಸ್ಥಾವರದಲ್ಲಿ ಹೆಚ್ಚಳ. ಆಪ್ತರು ಮತ್ತು ನೆರೆಹೊರೆಯವರಲ್ಲಿ ವರ್ಚಸ್ಸು. ಉದ್ಯೋಗದಲ್ಲಿ ಪ್ರಗತಿ ಜೋರಿನಿಂದ ಸಿಕ್ಕುವದು ಆದರೆ ಪ್ರತಿಷ್ಠೆ ಕಡಮೆ. ಮತ್ತು ಲಾಭವೂ ಹೆಸರಿಗೆ ಮಾತ್ರ. ವೆಚ್ಚದ ವಿಷಯ ಮಾತ್ರ ಇಮ್ಮಡಿ. ಮಿತ್ರತ್ವದಲ್ಲಿ ವಿರೋಧ ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಶತ್ರುಗಳದೆ ಹೆಚ್ಚು ಜೋರು. ಪ್ರವಾಸ ಮತ್ತು ಪತ್ರವ್ಯವಹಾರ ಭೆಟ್ಟಿಗಿಂತ ಹೆಚ್ಚು ಅನುಕೂಲ. ಕೃತ್ತಿಕೆಯ ೪ನೆ ಮತ್ತು ರೋಹಿಣಿಯ ಮೊದಲನೆ ೩ ಚರಣಗಳಿಗೆ ತೊಂದರೆ ಕಡಮೆ. ತಾ. ೨೬, ೨೯, ೩೦ ಅನುಕೂಲ.

## ಮಿಥುನ

ಪ್ರಕೃತಿ ಮತ್ತು ಸ್ತ್ರೀ ಸುಖ ಉತ್ತಮ. ಉಳಿದವರೊಡನೆ ಬಹಳ ಕಲಹ. ಸ್ಥಾವರ ಜಂಗಮ ಆಸ್ತಿಯಲ್ಲಿ ಕೆಲ ಹೊಸ ಸುಧಾರಣೆಗಳು. ಅತಿ ಸಾಹಸದ ಕೃತ್ಯಗಳು. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಬಹಳ ಉತ್ತಮ. ಆದರೆ ಯಾವದೇ ಕೆಲಸವಾಗಬೇಕಾದರೆ ಬಹಳ ಕಷ್ಟದಿಂದ ಸಾಧ್ಯ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಯಶಸ್ಸು ಸಿಕ್ಕುವಂತಹ ಸ್ಥಿತಿ. ಮಿತ್ರತ್ವದಲ್ಲಿ ಸ್ವಲ್ಪ ರಸಕಸಿ. ಪ್ರವಾಸಾದಿ ಕೆಲಸ ಅಲ್ಪಸ್ವಲ್ಪ ಕಷ್ಟದ್ದು. ಮೃಗಾದ ೪ನೆ ಮತ್ತು ಆರಿದ್ರಾದ ಮೊದಲನೆ ೩ ಚರಣಗಳಿಗೆ ತೊಂದರೆ ಕಡಮೆ. ತಾ. ೨೬, ೨೭, ೨೮, ೩೧ ಅನುಕೂಲ.

## ಕರ್ಕ

ನಿಮ್ಮ ಮತ್ತು ಹೆಂಡತಿಯ ಪ್ರಕೃತಿ ಗಟ್ಟಿಮುಟ್ಟ ಪ್ರಾಪಂಚಿಕ ಸುಖ ಉತ್ತಮ. ಆದರೆ ಪತಿಪತ್ನಿಯರ ಮನಸಿಗೆ ಬಹಳ ಚಿಂತೆಯುಂಟಾಗಿ ಮನಸ್ಸು ಯಾವಾಗಲೂ ವ್ಯಗ್ರವಾಗುವದು, ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಸಾಧಾರಣ ಅನುಕೂಲ. ಮಿತ್ರಸುಖ ಅನುಕೂಲ ಆದರೆ ಅವರಲ್ಲಿ ಒಬ್ಬರಿಗೆ ಸ್ವಲ್ಪ ಆಪತ್ತಿಯ ಅಂಜಿಕೆ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉಭಯ ಪಕ್ಷಗಳಲ್ಲಿ ಸಮಾನಸ್ಥಿತಿ ಪ್ರವಾಸಕ್ಕಿಂತ ಭೆಟ್ಟಿ ಮತ್ತು ಪತ್ರವ್ಯವಹಾರ ಅನುಕೂಲ. ಪುಷ್ಯದ ೪ನೆ ಮತ್ತು ಆಶ್ಲೇಷಾದ ಮೊದಲನೆ ೩ ಚರಣಗಳಿಗೆ ತೊಂದರೆ ಕಡಮೆ. ತಾ ೨೬, ೨೭, ೨೮ ಅನುಕೂಲ.

## ಸಿಂಹ

ಪ್ರಕೃತಿ ಮತ್ತು ಪ್ರಾಪಂಚಿಕ ಸುಖ ಸಾಧಾರಣವೆ, ಹೆಂಡತಿಗೆ ಶಾರೀರಿಕ ಮತ್ತು ಮಾನಸಿಕ ಕ್ಲೇಶದಿಂದ ಬಹಳ ತೊಂದರೆ. ನಿಮ್ಮಿಬ್ಬರಲ್ಲಿ ಒಂದು ಕ್ಷಣ ಕೂಡ ಕೂಡುವದು ಕಠಿಣ. ಉದ್ಯೋಗದಲ್ಲಿ ಪ್ರಗತಿ ಮತ್ತು ಪ್ರತಿಷ್ಠೆ ಜೋರಿನದು. ಆದರೆ ಲಾಭ ಬಹಳ ಕಡಮೆ ಉಳಿದ ವೆಚ್ಚ ಮಾತ್ರ ಅವಾಸ್ತವವಾಗಿಳಿಗುವ ಪ್ರಸಂಗ ಮಿತ್ರರು ಬಹಳ ವೆಚ್ಚದಲ್ಲಿ ಬೀಳುವಂತೆ ಕಲಿಸುವರು: ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಸಂಪೂರ್ಣ ಹಿನ್ನೆಟ್ಟುವದು. ಪ್ರವಾಸ ಮತ್ತು ಭೆಟ್ಟಿ ಪತ್ರವ್ಯವಹಾರಕ್ಕಿಂತ ಅನುಕೂಲ ಆದರೆ ಮಘಾದ ೪ನೆ ಮತ್ತು ಪೂರ್ವಾದ ಮೊದಲನೆ ೩ ಚರಣಗಳಿಗೆ ತೊಂದರೆ ಕಡಮೆ. ತಾ. ೨೭, ೨೮, ೨೯ ಅನುಕೂಲ.

## ಕನ್ಯಾ

ಪ್ರಕೃತಿ ಮತ್ತು ಪ್ರಾಪಂಚಿಕ ಸುಖ ಬಹಳ ಉತ್ತಮ. ಆದರೆ ಹೆಂಡತಿಯ ಶಾರೀರಿಕ ಇಲ್ಲವೆ ಮಾನಸಿಕ ಸ್ಥಿತಿ ಸ್ವಲ್ಪ ಕೆಡುವದು. ಮಕ್ಕಳ ಉತ್ಕರ್ಷ ಒಳ್ಳೇದು. ವೆಚ್ಚ ಬಹಳಾದರೂ ಸತ್ಕಾರ್ಯದಲ್ಲಿ ವಿನಿಯೋಗ, ಪ್ರತಿಯೊಂದು ವಿಷಯದಲ್ಲಿ ಮನಸಿನಂತೆ ಸಾಹಸದ ಉತ್ಸಾಹವುಳಿದು ಪ್ರಗತಿ ಮತ್ತು ಪ್ರತಿಷ್ಠೆ ತುಂಬ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಬಹುಶಃ ಒಡಂಬಡಿಕೆಯೆ. ಅದಾಗದಿದ್ದರೆ ಯಶಸ್ಸಿನ ಯೋಗ. ನಿಮ್ಮ ಕಡೆಗೆಯೆ ಮಿತ್ರರು ಹೀನ ಮಾತುಗಳನ್ನಾಡುವರು. ಮತ್ತು ಅದರಂತೆ ನಡೆಯುವರು. ಪ್ರವಾಸಾದಿ ಕೆಲಸ ಸುಖಕರ. ಉತ್ತರಾದ ೪ನೆ ಮತ್ತು ಹಸ್ತಾದ ಮೊದಲನೆ ೩ ಚರಣಗಳಿಗೆ ಹೆಚ್ಚು ಅನುಕೂಲ. ತಾ. ೨೯, ೩೦, ೩೧, ೧ ಅನುಕೂಲ.

## ತುಲಾ

ಪ್ರಕೃತಿ ಸಾಧಾರಣವೆ. ಹೆಂಗಸಿ ಮತ್ತು ಪ್ರಾಪಂಚಿಕ ಸುಖ ಬಹಳ ಕಡಮೆ. ಸಹಜ ಮಾತಾಡಿದರೂ ಬಹಳ ವಿಪರ್ಯಸ್ತವೆನಿಸುವದು. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಉತ್ತಮವೆ. ಆದರೆ ದೊಡ್ಡ ದೊಡ್ಡ ವೆಚ್ಚದ ಪ್ರಸಂಗಗಳು ತಲೆಬಿಸಿ ಕರಿಕೆ ಹಿಡಿಸುವಂಥವು. ಸಾವಕಾರರ ತಗಾದೆಯೂ ಹೆಚ್ಚಾಗಿ ಮನಸಿನಲ್ಲಿ 'ಚೈನಿ'ಯಾಗುವದಿಲ್ಲ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಪ್ರತಿಕೂಲತೆ. ಮಿತ್ರಸುಖ ಅನುಕೂಲ. ಸ್ವಪ್ನಗಳು ವಿಪರೀತ. ಪ್ರವಾಸಾದಿ ಕೆಲಸ ಅನಃಕೂಲ. ಚಿತ್ರಾದ ೪ನೆ ಮತ್ತು ಸ್ವಾತಿಯ ಮೊದಲನೆ ೩ ಚರಣಗಳಿಗೆ ತೊಂದರೆ ಕಡಮೆ. ತಾ. ೨೬, ೨೭, ೨೮, ೩೧ ಅನುಕೂಲ.

## ವೃಶ್ಚಿಕ

ಸ್ತ್ರೀ ಸುಖ ಅನುಕೂಲ ಮತ್ತು ಉಭಯತರ ಪ್ರಕೃತಿ ಉತ್ತಮ. ಆದರೆ ಮಕ್ಕಳಲ್ಲಿ ಒಬ್ಬರಿಗೆ ಬಹಳ ಕ್ಲೇಶ ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಅಪೇಕ್ಷೆಗಿಂತ ಹೆಚ್ಚು. ಆದರೆ ಕೌಟುಂಬಿಕ ಹಿತಕ್ಕಾಗಿ ಇಲ್ಲವೆ ಮರ್‍ಯಾದೆಗಾಗಿ ಬಹಳ ದೊಡ್ಡ ವೆಚ್ಚ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಬಹಳ ಅನುಕೂಲತೆ. ಆದರೆ ಶತ್ರುಗಳ ಪ್ರಾಬಲ್ಯವನ್ನು ನೋಡಿ ಮನಸ್ಸು ಬೇಜಾರಗೊಳ್ಳುವದು. ಮಿತ್ರಸುಖ ಉತ್ತಮ. ಸ್ವಪ್ನ ಶುಭ ಸೂಚಕ. ಪ್ರವಾಸಾದಿ ಕೆಲಸ ಹಿತದ್ದು. ಅನುರಾಧೆಯ ೪ನೆ ಮತ್ತು ಜ್ಯೇಷ್ಠಾದ ಮೊದಲನೆ ೩ ಚರಣಗಳಿಗೆ ತೊಂದರೆ ಕಡಮೆ. ತಾ. ೨೬, ೨೭, ೨೮, ೨೯ ಅನುಕೂಲ.

## ಧನು

ಪ್ರಕೃತಿ ಉತ್ತಮ ಆದರೆ ಹೆಂಡತಿಗೂಡ ಬಹಳ ಮತಭೇದ. ಮಕ್ಕಳ ಬಗ್ಗೆ ಕೆಲ ಉತ್ಕರ್ಷದ ಘಟನೆಗಳು ಆದರೂ ಬಹುಶಃ ಅನೇಕ ವಿಷಯಗಳಲ್ಲಿ ಪ್ರಾಪಂಚಿಕ ಸುಖ ಕಡಮೆ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಉತ್ತಮವೆ. ಆದರೆ ಆಯಾ ಕೆಲಸ ಪರಾವಲಂಬಿಯಾಗುಳಿಯುವ ಸರತಿ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಶತ್ರುಗಳ ಹಾನಿ. ಆದರೆ ಸ್ವಂತದ ಲಾಭವೂ ಕಡಮೆ. ಮಿತ್ರತ್ವದಲ್ಲಿ ವಿರೋಧ. ಬಂಧುವರ್ಗದವರು ನಿಮ್ಮ ಬಗ್ಗೆ ಜನರಲ್ಲಿ ಅನಾದರ ಹೆಚ್ಚಿಸುವ ಪ್ರಯತ್ನ ಮಾಡುವರು. ಭೆಟ್ಟಿ ಮತ್ತು ಪತ್ರವ್ಯವಹಾರಕ್ಕಿಂತ ಪ್ರವಾಸ ಅನುಕೂಲ. ಮೂಲಾದ ೪ನೆ ಮತ್ತು ಪೂರ್ವಾಷಾಢಾದ ಮೊದಲನೆ ೩ ಚರಣಗಳಿಗೆ ತೊಂದರೆ ಕಡಮೆ. ತಾ. ೨೭, ೨೮, ೩೧, ೧ ಅನುಕೂಲ.

## ಮಕರ

ಪ್ರಕೃತಿ ಅನುಕೂಲ. ಸ್ತ್ರೀ ಸುಖ ನೆಟ್ಟಗೆ ಆದರೆ ಮಕ್ಕಳ ಬಗ್ಗೆ ಸ್ವಲ್ಪ ಚಿಂತೆ ಹೆಚ್ಚುವ ಸಂಗತಿಗಳು ಉಳಿದ ವಿಷಯಗಳಲ್ಲಿಯೂ ಪ್ರಾಪಂಚಿಕ ಸುಖ ಕಡಮೆ. ಉದ್ಯೋಗದಲ್ಲಿ ಪ್ರಗತಿ ಮತ್ತು ಲಾಭ ಉತ್ತಮ ಆದರೆ ಪ್ರತಿಷ್ಠೆ ಕಡಮೆ ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಶತ್ರುಗಳದೇ ಜೋರು ಮಿತ್ರತ್ವದಲ್ಲಿ ಸ್ವಲ್ಪ ವಿರೋಧ. ಭೆಟ್ಟಿಗಿಂತ ಪ್ರವಾಸ ಮತ್ತು ಪತ್ರವ್ಯವಹಾರವೂ ಅನುಕೂಲ ಉತ್ತರಾಷಾಢಾದ ೪ನೆ ಮತ್ತು ಶ್ರವಣಾದ ಮೊದಲನೆ ೩ ಚರಣಗಳಿಗೆ ತೊಂದರೆ ಕಡಮೆ. ತಾ. ೨೯, ೩೦, ೩೧, ೧ ಅನುಕೂಲ.

## ಕುಂಭ

ನಿಮ್ಮ ಪ್ರಕೃತಿ ಆಸಮಾಧಾನ. ಹೆಂಡತಿಯದು ಅನುಕೂಲ, ಆದರೆ ಉಭಯತರಲ್ಲಿ ಬಹಳ ವಿರೋಧ; ಉಳಿದ ವಿಷಯಗಳಲ್ಲಿಯೂ ಪ್ರಾಪಂಚಿಕ ಸುಖ ಕಡಮೆ. ಉದ್ಯೋಗದಲ್ಲಿ ಲಾಭ ಅನುಕೂಲ, ಆದರೆ ಪ್ರಗತಿ ಮತ್ತು ಪ್ರತಿಷ್ಠೆ ಬಹಳ ಮಂದ. ಮಿತ್ರಸುಖ ಉತ್ತಮ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಅನುಕೂಲತೆ ಇದ್ದರೂ ನೀವೇ ಅಂಜುಗುಳಿತನದಿಂದ ಬಹಳ ಗೊಂದಲದಲ್ಲಿ ಬೀಳುವ ಸಂಭವ. ಪ್ರವಾಸ ಅನುಕೂಲ ಆದರೆ ಭೆಟ್ಟಿ ಮತ್ತು ಪತ್ರವ್ಯವಹಾರ ಬಹಳ ಕೆಟ್ಟ. ಧನಿಷ್ಠಾದ ೪ನೆ ಮತ್ತು ಶತತಾರಿಕೆಯ ಮೊದಲನೆ ೩ ಚರಣಗಳಿಗೆ ತೊಂದರೆ ಕಡಮೆ. ತಾ. ೨೭, ೩೧, ೧ ಅನುಕೂಲ.

## ಮೀನ

ಪ್ರಕೃತಿಯಲ್ಲಿ ಕೆಲ ನಿಜ ಆದರೆ ಕೆಲವು ಮಿಥ್ಯಾ ತಕರಾರುಗಳು, ಸ್ತ್ರೀ ಮತ್ತು ಪ್ರಾಪಂಚಿಕ ಸುಖ ಉತ್ತಮ ಸಂಗ್ರಹದಲ್ಲಿ ಹೆಚ್ಚಳ. ಉದ್ಯೋಗದಲ್ಲಿ ಪ್ರಗತಿ ಮತ್ತು ಲಾಭ ಉತ್ತಮ. ಆದರೆ ಪ್ರತಿಷ್ಠೆ ಕಡಮೆ. ಮಿತ್ರರು ಮನಸಿಗೆ ಬಂದಂತೆ ಠೀವಿ ಇಡುವರು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಬಹಳ ಯಶಸ್ಸು. ಸ್ವಪ್ನ ಶುಭ ಸೂಚಕ. ಪ್ರವಾಸ ಮತ್ತು ಪತ್ರವ್ಯವಹಾರ ಭೆಟ್ಟಿಗಿಂತ ಅನುಕೂಲ. ಉತ್ತರಾಭಾದ್ರಪದದ ೪ನೆ ಮತ್ತು ರೇವತಿಯ ಮೊದಲನೆ ೩ ಚರಣಗಳಿಗೆ ಹೆಚ್ಚು ಅನುಕೂಲ. ತಾ. ೨೬, ೨೯, ೩೦ ಅನುಕೂಲ.

# ಡಿ. ಎ. ವಿ. ಕಾಲೇಜ ಕನ್ನಡ ಸಂಘ ಸೊಲ್ಲಾಪುರ

ಡಿ. ಎ. ವ್ಹಿ. ಕಾಲೇಜ ಸೊಲ್ಲಾಪೂರ ಕನ್ನಡ ಸಾಹಿತ್ಯ ಸಂಘದ ಈ ವರುಷದ ಉದ್ಘಾಟನ ಸಮಾರಂಭವು ಸಂಘದ ಅಧ್ಯಕ್ಷರಾದ ಕವಿವರ್ಯ ದ. ರಾ. ಬೇಂದ್ರೆಯವರ ಹಸ್ತದಿಂದ ತಾ॥ ೫-೮-೪೬ ನೇ ದಿವಸ ನೆರವೇರಿತು. ಶ್ರೀಮಾನ್ ಎಸ್ ಎನ್ ನಾಯಿಕ ಇವರು ಚಿಕ್ಕ ಭಾಷಣ ಗೈದು, ಕವಿವರ್ಯ ಅಂಬಿಕಾತನಯರ ೫೦ ನೇ ಹುಟ್ಟುಹಬ್ಬದ ನಿಮಿತ್ತವಾಗಿ ಪ್ರೇಮಪೂರಿತ ಸನ್ಮಾನವನ್ನು ಸಲ್ಲಿಸಿದ್ರು ಮಹನೀಯರಿಗೂ ಸಂಘ ಸಂಸ್ಥೆಗಳಿಗೂ ಅಭಿನಂದನೆಗಳನ್ನು ಅರ್ಪಿಸಿದರು. ನಂತರ ಅಧ್ಯಕ್ಷರಾದ ಕವಿವರ್ಯ ಬೇಂದ್ರೆಯವರು ಭಾರತದ ಏಕೀಕರಣದ ಸಮಸ್ಯೆಯನ್ನು ... ಯಾಗಿ ಇಟ್ಟುಕೊಂಡು "ಕರ್ನಾಟಕದ ... ರಣ ದೃಷ್ಟಿ" ಎಂಬ ವಿಷಯದ ಮೇಲೆ ... ಪರಿಪೂರ್ಣ ಭಾಷಣವನ್ನು ಗೈದರು. ಸಂಘದ ಕಾರ್ಯದರ್ಶಿಯನ್ನು ನಿಯಮಿಸಿದ ಮೇಲೆ 'ವಂದೇಮಾತರಂ' ಗೀತೆಯೊಂದಿಗೆ ಸಭೆ ಮುಕ್ತಾಯವಾಯಿತು.

ತಾ॥ ೭-೮-೪೬ ಕ್ಕೆ "ಕವೀಂದ್ರ ರವೀಂದ್ರ ಟಾಗೋರ" ರ ಪುಣ್ಯ ತಿಥಿಯನ್ನು ನೆರವೇರಿಸುವ ಸುಯೋಗ ಸಂಘದ ಈ ವರುಷದ ಮೊದಲನೇ ಕಾರ್ಯಕ್ರಮವಾಗಿ ಪರಿಣಮಿಸಿತು. ಪ್ರಿನ್ಸಿಪಾಲ ಶ್ರೀ ರಾಮ ಶರ್ಮಾ ಇವರು ಅಧ್ಯಕ್ಷ ಸ್ಥಾನವನ್ನು ಅಲಂಕರಿಸಿದ್ದರು. ಕವಿವರ್ಯ ದ. ರಾ. ಬೇಂದ್ರೆಯವರು ಕವೀಂದ್ರ ರವೀಂದ್ರರ ಬಗ್ಗೆ ತಮ್ಮ ಕೆಲವು ಸ್ವಪ್ರೋಕ್ತಿಗಳನ್ನು ವ್ಯಕ್ತಪಡಿಸಿ ರವೀಂದ್ರರ "ವೂಮನ್" (Woman) ಎಂಬ ಕವಿತೆಯ ಭಾವಾನುವಾದವನು ಕನ್ನಡದಲ್ಲಿ ಓದಿ ತೋರಿಸಿದರು. ನಂತರ ಅದೇ ಕವಿತೆಯ ವಿವಿಧ ಭಾಷೆಗಳ ಅನುವಾದವನ್ನು ಶ್ರೀ ವಿ. ವಿ ಲೋಕರೆ (ಕನ್ನಡ), ಪ್ರೊ. ಪಿ. ರಾಮಸ್ವಾಮಿ (ತೆಲಗು), ಪ್ರೊ. ರಂಗನ್ (ಸಂಸ್ಕೃತ), ಪ್ರೊ. ವರ್ಮಾ (ಹಿಂದಿ), ಪ್ರೊ ಬಾಹರಿ (ಉರ್ದು), ಪ್ರೊ ಟೇಂಬೆಕರ (ಮರಾಠಿ), ಪ್ರೊ ಮೆನನ್ (ಮಳೆಯಾಳಿ) ಪ್ರೊ ಗಾಡಗೀಳ (ಜರ್ಮನ) ಪ್ರೊ ನಾ... [ಕನ್ನಡ], ಈ ಮಹನೀಯರು ವಿಶೇಷ ಉತ್ಸಾಹದಿಂದ ಸುಶ್ರಾವ್ಯವಾಗಿ ಓದಿ ತೋರಿಸಿದರು. ಅಧ್ಯಕ್ಷರ ವಿಚಾರಪೂರಿತ ಭಾಷಣ ಹಿಂದಿಯಲ್ಲಾಯಿತು.



ಈ ಪತ್ರಿಕೆಯು ಹುಬ್ಬಳ್ಳಿಯ ಸಂಯುಕ್ತ ಕರ್ನಾಟಕ ಮುದ್ರಣಾಲಯದಲ್ಲಿ ರಾಷ್ಟ್ರೀಯ ವಾಙ್ಮಯ ಪ್ರಕಾಶನ ಟ್ರಸ್ಟಿನ ಪರವಾಗಿ ಹ. ರಾ. ಮೋಹರೆಯವರಿಂದ ಮುದ್ರಿತ ಪ್ರಕಟವಾಯಿತು